ಲೇಖಕ: ಹೊಸಕೆರೆ ಚಿದಂಬರಯ್ಯ ಬೆಲೆ ೨-೮-೦

# ಗೀತಾರ್ಥಚಂದ್ರಿಕೆ ಹೇಗಿದೆ?

೧. ಈ ಗೀತಾರ್ಥಚಂದ್ರಿಕೆಯು ವೇಷಭೂಷಣಗಳಿಂದ ಕಣ್ಣಿಗೆ ಹಬ್ಬವನ್ನುಂಟು ಮಾಡುತ್ತಿರುವುದಷ್ಟೇ. ಅಲ್ಲದೆ ದೀರ್ಘವ್ಯಾಸಂಗಸ್ವಾನುಭವಗಳಿಂದ ಪರಿಪಕ್ವವಾದ ತಮ್ಮ ಅಭಿಪ್ರಾಯಗಳನ್ನು ಸುಲಲಿತವಾದ ಕನ್ನಡದಲ್ಲಿ ಪ್ರಕಟಗೊಳಿಸುತ್ತಲಿದೆ. ಆರ್ಯಧರ್ಮಾಭಿಮಾನಿಗಳಾದ ಕನ್ನಡಿಗರು ಇದರ ಪಠನಲಾಭವನ್ನು ಯಥೇಷ್ಟವಾಗಿ ಪಡೆಯಲೆಂದು ಕೋರುತ್ತೇನೆ. —**ಬಿ. ರಾಮರಾವ್**, ಎಂ. ಎ., ಎಲ್ ಎಲ್., ಬಿ.

೨. ಶೈಲಿಯು ಸುಲಭವೂ ಸರಲವೂ ಇರುವದು. ಗ್ರಂಥವು ಎಲ್ಲ ಕನ್ನಡಿಗರಿಂದಲೂ ಸಂಗ್ರಾಹ್ಯವು. —**ಕರ್ಮವೀರ**

೩. ಇದು ನಮ್ಮ ಬಾಯಿಗೂ ಹೊಟ್ಟೆಗೂ ಗಂಟಲಿಗೂ ಹದವಾದ ತುತ್ತು. ಪುಸ್ತಕವು ಭಗವದ್ಗೀತಾಭಕ್ತರಿಗೆ ಎಲ್ಲ ರೀತಿಯಿಂದಲೂ ಒಪ್ಪುವಂತಾಗಿರುವದು. ವ್ಯಾಖ್ಯಾನವು ಸುಲಲಿತವಾದ ಕನ್ನಡಲ್ಲಿ ಬರೆದುದಾಗಿದೆ. —**ಜಯಕರ್ಣಾಟಕ**

೪. ಒಟ್ಟಿನಲ್ಲಿ ಈ ಗೀತಾರ್ಥಚಂದ್ರಿಕೆಯನ್ನು ಪ್ರತಿಯೊಬ್ಬ ಕನ್ನಡಿಗನೂ ಒಮ್ಮೆಯಾದರೂ ಓದಬೇಕೆಂದು ನಾವು ನಮ್ಮ ಪ್ರಿಯಕನ್ನಡಿಗರನ್ನು ಕುರಿತು ಸೂಚಿಸದೆ ಇರಲಾರೆವು. —**ಸದ್ಬೋಧಚಂದ್ರಿಕೆ**

೫. ಬರೇ ಮೂಲಶಬ್ದಗಳಿಂದ ಭಾವವು ಪೂರ್ಣವಾಗಿ ತಿಳಿಯದಿದ್ದಲ್ಲಿ ಅದನ್ನು ತಿಳಿಸುವಂತೆ ಉದಾಹರಣೆಗಳೂ ಕಥಾಸಂದರ್ಭಗಳೂ ಬರೆಯಲ್ಪಟ್ಟವೆ. ಅದರಿಂದ ಗೀತೆಯನ್ನು ಹೊಸದಾಗಿ ಕಲಿಯುವವರಿಗೂ ಇದು ಬಹು ಪ್ರಯೋಜನಕಾರಿಯಾಗಿದೆ. —**ಕಾನಡಾಧುರೀಣ**

೬. ಲೇಖಕರು ಕನ್ನಡಗದ್ಯಗ್ರಂಥಕಾರರ ಪಂಗಡದಲ್ಲಿ ಆಚಾರ್ಯಸ್ಥಾನವನ್ನು ಪಡೆದಿರುವರು. ಅವರದು ಸವಿಯಾದ ಶೈಲಿ. ಗೀತಾಶ್ಲೋಕಗಳ ಪ್ರತಿಶಬ್ದದ ಭಾವವನ್ನೂ ಸೌಂದರ್ಯವನ್ನೂ ರಹಸ್ಯವನ್ನೂ ಎತ್ತಿ ತೋರಿಸುವದಕ್ಕಾಗಿ ಲೇಖಕರು ಬಹಳ ಶ್ರಮೆ ವಹಿಸಿರುತ್ತಾರೆ. ಆಧುನಿಕವಿಚಾರವಾದಿಗಳಿಗೂ ಸಹ ಇದು ಅಂಗೀಕಾರಯೋಗ್ಯವೆಂದೇ ಎಣಿಸಬೇಕು. ಈ ಪುಸ್ತಕಕ್ಕೆ ಹಾಕಿರುವ ಬೆಲೆಯೂ ಯಾರೂ ಗೊಣಗುಟ್ಟುವದಕ್ಕೆ ಅವಕಾಶಕೊಡುವದಿಲ್ಲ —**ವಿಶ್ವಕರ್ಣಾಟಕ**

# ಗೀತೆಯ ತಿರುಳು

ಲೇಖಕ :

ಹೊಸಕೆರೆ ಚಿದಂಬರಯ್ಯ

ಭಕ್ತಬಂಧುಕಾರ್ಯಾಲಯ, ಬಸವನಗುಡಿ, ಬೆಂಗಳೂರು ಸಿಟಿ.

ಪ್ರಕಾಶಕ :

ಚಿಕ್ಕಬಳ್ಳಾಪುರದ ಮಳಮುದ್ರೆ ಸುಬ್ಬರಾಯಪ್ಪನವರ ಮಗ

**ವಾಸುದೇವರಾವ್,**

ಬೆಂಗಳೂರು.

ಮೊದಲನೆ ಮುದ್ರಣ ೧,೦೦೦ ಪ್ರತಿಗಳು

ಬೆಂಗಳೂರು ಸಿಟಿ:

ಅಧ್ಯಾತ್ಮಪ್ರಕಾಶಮುದ್ರಣಾಲಯ,

ಚಾಮರಾಜಪೇಟೆ.

ಕ್ರಿ. ೧೯೩೧]　　ಬೆಲೆ:೦-೪-೦　　[ಶಾ. ೧೮೫೩

# ವಿಷಯಕ್ರಮ

---



—o—

[redacted]

# ಮೊದಲ ಮಾತು

ಜಗತ್ತಿನಲ್ಲಿ ನಾಲಿಗೆಯು ಸವಿಯನ್ನು ಚಪ್ಪರಿಸುವದು, ಚರ್ಮವು ಸೋಂಕಿನಿಂದ ಮೈಮರೆಯುವದು— ಮೊದಲಾಗಿ ಇಂದ್ರಿಯಗಳಿಂದ ಹೊರಗಣ ವಸ್ತುಗಳನ್ನು ಹೊಂದಿ ಸುಖವನ್ನು ಪಡೆಯುವದು ಬುದ್ಧಿ ಇಲ್ಲದ ಪ್ರಾಣಿಗಳಲ್ಲಿಯೂ ಕೂಡ ಕಂಡುಬರುವ ಮಾತಾಯಿತು. ತಾನು ಬುದ್ಧಿಯುಳ್ಳವನೆಂದು ಹೆಮ್ಮೆಗೊಳ್ಳುವ ಮನುಷ್ಯನು ತನ್ನ ಹೆಚ್ಚುಗಾರಿಕೆಯನ್ನುಳಿಸಿಕೊಳ್ಳಬೇಕಾದರೆ ಯಾವ ಇಂದ್ರಿಯಗಳಿಗೂ ದೊರೆಯದೆ ಬುದ್ಧಿಗೆ ಮಾತ್ರ ನಿಲುಕುವ ಸುಖವನ್ನು ಪಡೆಯುವದೊಂದೇ ದಾರಿ. ಪ್ರಪಂಚದ ಒಳವಿಷಯಗಳಲ್ಲಿ ಬುದ್ಧಿಯು ತನ್ನ ಬೆಳಕನ್ನು ಎಷ್ಟೇ ಬೀರಿದರೂ ಆ ವಿಷಯಗಳು ಗಳಿಗೆಗೊಂದೊಂದು ಬಣ್ಣವನ್ನು ತಾಳುವ ಗೋಸುಂಬೆಯಂತಿರುವದರಿಂದ ನಿಲುಗಡೆ ಇಲ್ಲದೆ ಹೋಗುವದರಿಂದಲೂ ಅದರಿಂದ ದೊರೆಯುವ ಸುಖವು ಇಂದ್ರಿಯಗಳಿಗೆ ಅಧೀನವಾದ್ದರಿಂದಲೂ ಮತ್ತು ಅದೂ ಸಾಕೆನಿಸುವಂಥದ್ದಾಗದೆ ಬೇಕುಬೇಕೆನಿಸಿ ಬಾಯಿನೀರು ಕರೆಸುತ್ತ ದೈನ್ಯವನ್ನುಂಟುಮಾಡುವದರಿಂದಲೂ ಕ್ಷುದ್ರನೆನಿಸುವದು. ಪ್ರಪಂಚವೆಂಬುದನ್ನೆಲ್ಲ ಒಂದು ಗಂಟಾಗಿ ತನ್ನ ವಿಚಾರಕ್ಕೆ ಒಳಪಡಿಸಿಕೊಂಡು, ನಿಯಮಕ್ಕೊಳಪಟ್ಟಂತೆ ಕಾಣುವ ದೇಶಧರ್ಮಗಳೂ ಕಾಲಧರ್ಮಗಳೂ ವಸ್ತುಧರ್ಮಗಳೂ ಉಳ್ಳ ಈ ಜಗತ್ತನ್ನು ಹುಟ್ಟಿಸಿದವನೂ ಆಳುವವನೂ ಯಾರೆಂದೂ ಈ ಜಗತ್ತಿನೊಳಗೆ ಸಿಕ್ಕಿ ಸುಖದ ಮೇಲೆ ದುಃಖವನ್ನೂ ದುಃಖದ ಮೇಲೆ ಸುಖವನ್ನೂ ಅನುಭವಿಸುತ್ತಿರುವ ತಾನು ಯಾರೆಂದೂ ತನಗೆ ಈ ಬಿಕ್ಕಟ್ಟಿನ ಸ್ಥಿತಿ ಏಕೆ ಬಂತೆಂದೂ ಈ ಕುತ್ತದಿಂದ ಪಾರಾಗುವದಕ್ಕೇನು ಮಾಡಬೇಕೆಂದೂ ಯೋಚಿಸುವದಾದರೆ ಅದು ತೂಕವಾದ ವಿಷಯವಾದ್ದರಿಂದ ಬುದ್ಧಿಯ ಯೋಗ್ಯತೆಗೆ ಒಪ್ಪಾಗಿಯೂ ಇರುವದು ; ನಿಲುಗಡೆಗೆ ನಿಲ್ಲುವಂಥದ್ದಾಗಿಯೂ ಇರುವದು ; ಇಂದ್ರಿಯಗಳ ಎಂಜಲಾಗದೆ ಬುದ್ಧಿಗೇ ಮೀಸಲಾದ ಆಹಾರವಾಗಿಯೂ ಇರುವದು ; ಮತ್ತು ಮನುಷ್ಯನನ್ನು ತೃಪ್ತಿಯ ತುಟ್ಟತುದಿಗೇರಿಸಿ ಹಾಯಾಗಿಯೂ ಮಾಡುವದು. ಇದನ್ನು ತಿಳಿಯದೆ ಹೋದರೆ ಮನುಷ್ಯನ ಬಾಳು ಉಪಯೋಗವಿಲ್ಲ.

ಇಂದ್ರಿಯಗಳಿಗೆ ನಿಲುಕದ ಈ ವಿಚಾರದ ಹಾದಿಯನ್ನು ಉಪನಿಷತ್ತುಗಳು ಚೆನ್ನಾಗಿ ತೋರಿಸಿಕೊಟ್ಟಿರುವವು. ತುದಿಮೊದಲು ಕಾಣದಷ್ಟು ವಿಸ್ತಾರವಾದ ಅವುಗಳಲ್ಲಿ ತಲೇ ಹಾಕಲರಿಯರಾದ ಎದೆನಡುಕರಾದ ನಮಗಾಗಿ ಭಗವಂತನು ಅವುಗಳ ಸಾರವನ್ನು ತೆಗೆದು ಗೀತೆಯ ರೂಪದಲ್ಲಿಟ್ಟಿರುವನು. ಉಪನಿಷತ್ತುಗಳೇ ಹಸುಗಳೆಂದೂ ಕೃಷ್ಣನೇ ಹಾಲುಕರೆಯುವವನೆಂದೂ ಅರ್ಜುನನೇ ಕರುವೆಂದೂ ಉತ್ಕೃಷ್ಟವಾದ ಗೀತೆಯೇ ಕೃಷ್ಣನು ಕರೆದಿಟ್ಟ ಅಮೃತವೆಂದೂ ದೊಡ್ಡವರು ಹೇಳುವರು. ಸ್ವಲ್ಪದರಲ್ಲಿ ಬಹಳ ವನ್ನು ತಿಳಿಸುವ ಗ್ರಂಥಗಳಲ್ಲಿ ಗೀತೆಯು ಮೊದಲನೆಯದಾಗಿರುವದು. ಇದರ ಮೂರ್ತಿಯು ಚಿಕ್ಕದಾದರೂ ಇದು ಮೋಕ್ಷಕ್ಕೊಯ್ಯುವ ಮೂರು ಮುಖ್ಯ ಮಾರ್ಗಗಳಲ್ಲಿ (ಸೂತ್ರ, ಉಪನಿಷತ್ತುಗಳು, ಗೀತೆ) ಒಂದಾಗಿ ಇದರ ಕೀರ್ತಿಯು ದೊಡ್ಡದಾಗಿರುವದು. ಕಲ್ಕತ್ತೆಯಲ್ಲಿ ಮೊನ್ನೆ ಮೊನ್ನೆ ಬರೀ ಗೀತೆಯದೇ ಒಂದು ಪ್ರದರ್ಶನವು ನಡೆದಿರುವದು. ಮಾರ್ಗಶಿರ ಶು. ೧೧ ದಿನ ಎಲ್ಲೆಲ್ಲಿಯೂ ಇದರ ಜಯಂತಿಯು ಬಹು ವಿಜೃಂಭಣೆಯಿಂದ ನಡೆಯುವದು. ಇಷ್ಟು ಪ್ರಾಶಸ್ತ್ಯವು ಗೀತೆಯ ಹೊರತು ಬೇರೆ ಯಾವ ಗ್ರಂಥಕ್ಕೂ ಬಂದಿಲ್ಲ. ಹೀಗೆ ಇದರ ಮೆಚ್ಚುಗೆಯು ಬರೀ ನಮ್ಮ ದೇಶದಲ್ಲಿ ಮಾತ್ರವೇ ಅಲ್ಲ; ಜಗತ್ತಿನಲ್ಲಿ ಲಿಪಿಯುಳ್ಳ ಭಾಷೆಗಳಲ್ಲೆಲ್ಲ ಇದು ಭಾಷಾಂತರವನ್ನು ಹೊಂದಿ ಮೆರೆಯುತ್ತಿರುವದು. ಅದರ ಅನುಯಾಯಿಗಳಾದ ನಾವು ಕೈಮುದುರಿಕೊಂಡು ಕೂತಿದ್ದರೂ ಅದು ತನ್ನ ಪ್ರತಿಭೆಯಿಂದ ಜಗತ್ತಿನ ಬೇರೆ ಯಾವ ಧರ್ಮಗ್ರಂಥವೂ ಪಡೆಯಲಾರದಷ್ಟು ಪ್ರಚಾರವನ್ನು ಪಡೆದು ಕೊಂಡಿರುವದು.

ಹೀಗಿದ್ದರೂ ಗೀತೆಯ ಮೇಲಿನ ಆದರದ ವಿಷಯದಲ್ಲಿ ಈಗಿನ ನಮ್ಮ ಸ್ಥಿತಿಯನ್ನು ನೋಡಿಕೊಂಡರೆ ನಾವು ಹುಟ್ಟುವವರಿಗೆ ಅಣ್ಣಂದಿರಾಗಿಯೂ ಬೆಳೆಯುವವರಿಗೆ ತಮ್ಮಂದಿರಾಗಿಯೂ ಇರುವೆವು. ನಮ್ಮಲ್ಲಿಯೇ ಎಷ್ಟೋ ಜನರು ಗೀತೆಯ ಸುಳಿವನ್ನೇ ಕಂಡವರಾಗಿಲ್ಲ. ಇದು ಬಹು ದುಃಖಕರವಾದ ಸಂಗತಿ ಹಿಂದುಧರ್ಮೀಯನೆಂಬ ಯಾವನ ಮನೆಯೂ ಗೀತೆ ಇಲ್ಲದೆ ಮನೆ ಎನಿಸಿಕೊಳ್ಳಲಾರದು. ಹಿಂದುಧರ್ಮೀಯನೆಂದು ಅಭಿಮಾನವನ್ನು ತಾಳುವ ಯಾವ ಮನುಷ್ಯನೂ ತನ್ನ ಹೃದಯದಲ್ಲಿ ಗೀತಾರ್ಥವನ್ನಿಟ್ಟುಕೊಳ್ಳದೆ ಹಿಂದುವಾಗಲಾರನು. ಆದ್ದರಿಂದ ಪ್ರತಿಯೊಂದು ಗುಡಿಸಲಿನಲ್ಲಿ ಕೂಡ ಇರುವದಕ್ಕಾಗುವಷ್ಟು ಚಿಕ್ಕದಾಗಿಯೂ ಹೆಂಗಸರೂ ಹುಡುಗರೂ ಕೂಡ ಓದಿ ತಿಳಿಯುವದಕ್ಕೆ ಆಗುವಷ್ಟು ಸುಲಭವಾಗಿಯೂ ಇರುವಂತೆ ನಾನು ಇಲ್ಲಿ ಅದರ ತಿರುಳನ್ನು ತೆಗೆದಿಟ್ಟಿದ್ದೇನೆ. ನಾನು

ಈ ಮೊದಲೇ ಗೀತಾರ್ಥವಿವರಣೆ ಮತ್ತು ಗೀತಾರ್ಥಚಂದ್ರಿಕೆ ಎಂಬ ಗ್ರಂಥಗಳನ್ನು ಬರೆದಿದ್ದರೂ ಮತ್ತು ಇದೇ ವಿಷಯದ ಮೇಲೆ ಇನ್ನೂ ಎಷ್ಟೋ ಜನರ ಎಷ್ಟೋ ಗ್ರಂಥಗಳಿದ್ದರೂ ಜನರಿಗೆ ಗೀತೆಯ ವಿಷಯದಲ್ಲಿ ಎಷ್ಟು ಸೌಲಭ್ಯವನ್ನು ಕಲ್ಪಿಸಿಕೊಟ್ಟರೂ ಸಾಲದೆಂದು ನಾನು ಈ ಕೆಲಸಕ್ಕೆ ಕೈಹಾಕಿದೆನು.

ಗೀತೆಯಂಥ ದೇವಲೋಕದ ಹಣ್ಣಿನ ಮೇಲೆ ಕೈಆಡಿಸುವ ಕುಶಲತೆ ನನ್ನಲ್ಲಿ ಸಾಕಾದಷ್ಟಿಲ್ಲದ್ದರಿಂದ ಅದರ ತಿರುಳು ಸಿಪ್ಪೆಯೊಡನೆಯೇ ಎಷ್ಟೋ ಉಳಿದುಕೊಂಡಿರಬಹುದು. ಹಣ್ಣಿನಿಂದ ತೋಡಿಕೊಂಡಿರುವ ತಿರುಳಿನಲ್ಲಿಯೂ ನನ್ನ ಕೈಯ ಒರಟುತನದಿಂದ ಕೆಲವು ಕಡೆಗೆ ಗಾಸಿಯಾಗಿಯೂ ಇರಬಹುದು. ಆದರೆ ಇದರ ಸವಿಯು ಸೆಳೆತಕ್ಕೆ ಮನಸ್ಸು ಸಿಕ್ಕಿದಾಗ ಈ ನನ್ನ ಕೊರತೆಗಳೊಂದೂ ಎದ್ದು ಕಾಣಲಾರವೆಂದು ಧೈರ್ಯಗೊಂಡು ಈ ಕೆಲಸಕ್ಕೆ ಮುಂದುವರಿದೆನು. ಈ ಗ್ರಂಥವನ್ನು ಸಿದ್ಧಗೊಳಿಸುವಾಗ ಗೀತೆಯ ಶ್ಲೋಕಗಳಲ್ಲಿರುವ ಮುಖ್ಯತಾತ್ಪರ್ಯವನ್ನೇ ಅಲ್ಲದೆ ಬಹುಹಿಂದಿನಿಂದಲೂ ಅಚ್ಚಳಿಯದೆ ತನ್ನ ಕೆಚ್ಚೆದೆಯಿಂದ ಊರ್ಜಿತಗೊಂಡಿರುವ ಸಂಪ್ರದಾಯವನ್ನು ಹಿಡಿದು ಶ್ರೀಮಚ್ಛಂಕರಭಗವತ್ಪಾದರು ಅನುಭವವನ್ನು ನೆನಪುಗೊಟ್ಟು ಯುಕ್ತಿಗೆ ಹೊಂದಿಸಿ ಬರೆದ ಭಾಷ್ಯದಲ್ಲಿರುವ ಅಮೌಲ್ಯವಾದ ಅನೇಕ ವಿವರಣೆಗಳನ್ನೂ ಆರಿಸಿ ತೆಗೆದುಕೊಂಡು ಅವುಗಳನ್ನು ಸುಲಭವಾಗಿ ತಿಳಿಯುವಂತ ಮಾತುಗಾರಿಕೆಯ ರೂಪಕ್ಕೆ ಎರಕಹೊಯ್ದಿರುತ್ತೇನೆ. ಆದ್ದರಿಂದ ಇದನ್ನು ಓದಿದೊಡನೆ ಗೀತೆಯ ಅರ್ಥವು ನಿಜವಾಗಿ ಮನಸ್ಸಿನಲ್ಲಿ ತಪ್ಪದೆ ರೂಪುಗೊಳ್ಳುವದೆಂದು ಎದುರುನೋಡುತ್ತೇನೆ. ಅಭಿಜ್ಞರು ಇದರಲ್ಲೇನಾದರೂ ತಪ್ಪುಗಳನ್ನು ಕಂಡಾಗ ದಯವಿಟ್ಟು ತಿದ್ದಿ ತಿಳಿಸಿದರೆ ತಲೆಬಾಗಿ ಸರಿಪಡಿಸಿಕೊಳ್ಳುತ್ತೇನೆ.

ಈ ಗ್ರಂಥವು ಗೀತಾರ್ಥವನ್ನು ನನ್ನ ಮನಸ್ಸಿಗೆ ಅಳವಡಿಸಿಕೊಳ್ಳಬೇಕೆಂದು ಟಿಪ್ಪಣಿಯ ರೂಪದಲ್ಲಿ ಮೊದಲಾಯಿತು. ಇದರ ಕೈಬರೆಹದ ಪ್ರತಿಯನ್ನು ಓದಿದ ನನ್ನ ಗೆಳೆಯರ ಮನಸ್ಸಿನ ಮೇಲೆ ಆದ ಪರಿಣಾಮವನ್ನು ನೋಡಿದ ಮೇಲೆ ಇದನ್ನು ನಮ್ಮ ಕನ್ನಡಿಗರೆಲ್ಲರ ಕಣ್ಣಮುಂದೆ ಇಡಬೇಕೆನಿಸಿತು. ಹೆಣ್ಣುಹೆತ್ತ ತಂದೆಗಳು ವರನನ್ನು ಹುಡುಕಿ ಹುಡುಕಿ ಕಂಡುಹಿಡಿದು ಕರೆದುತಂದು ಹೆಣ್ಣನ್ನು ಅವನ ಕೈಯಲ್ಲಿಟ್ಟು ದೂರದಿಂದ ಮಗಳ ಮತ್ತು ಅಳಿಯನ ಏಳಿಗೆಯನ್ನು ನೋಡುತ್ತ ಸಂತೋಷಿಸುವಂತೆ ನನ್ನಂಥ ಬಡತನದ ಗ್ರಂಥಕರ್ತರು ಪ್ರಕಾಶಕರನ್ನು ಅಲ್ಲಲ್ಲಿ ಹುಡುಕಿ ಹುಡುಕಿ ಕಂಡುಹಿಡಿದು ಕರೆದುತಂದು ಗ್ರಂಥವನ್ನು ಅವರ ಕೈಯಲ್ಲಿಟ್ಟು ದೂರದಿಂದ ಗ್ರಂಥದ ಮತ್ತು ಅದರ ಪ್ರಕಾಶಕರ ಏಳಿಗೆಯನ್ನು ನೋಡುತ್ತ ಸಂತೋಷಿಸಬೇಕಾಗುತ್ತದೆ. ವ್ಯಾವಹಾರಿಕವಿಚಾರಗಳ ಗ್ರಂಥವು ಒಂದು ವೇಳೆ

ಗಂಡೆನಿಸಬಹುದು ; ಧಾರ್ಮಿಕವಿಚಾರದ ಗ್ರಂಥಗಳು ಮಾತ್ರ ಯಾವಾಗಲೂ ಹೆಣ್ಣೆ. ಏಕೆಂದರೆ ಅವು ಹಣವನ್ನು ಸಂಪಾದಿಸುವದಿಲ್ಲ. ಇಂಥ ಈ ಗ್ರಂಥದ ಸಂದರ್ಭದಲ್ಲಿ ಇದನ್ನು ಮುಗಿಸುವದರೊಳಗೇ ಭಗವಂತನು ಇದಕ್ಕೊಬ್ಬ ಪ್ರಕಾಶಕರನ್ನು ನನಗೆ ಗಂಟುಹಾಕಿಕೊಟ್ಟನು. ನನ್ನ ನೆರೆಯ ಗೃಹಸ್ಥರಾದ ಶ್ರೀ. ವಾಸುದೇವರಾಯರು ಆಗಾಗ ನನ್ನ ಬಳಿಗೆ ಬಂದು ಧಾರ್ಮಿಕಪ್ರಸಂಗಗಳನ್ನು ಜರುಗಿಸುವ ರೂಢಿ ಈಗಲೂ ಇದೆ. ಒಂದು ದಿನ ಮಾತಿನ ನಡುವೆ ಗೀತೆಯ ಹೆಚ್ಚುಗಾರಿಕೆಯ ವಿಷಯವು ಬಂದಾಗ ನಾನು ಈ ಗ್ರಂಥವನ್ನು ಬರೆಯುತ್ತಿರುವ ವಿಷಯವನ್ನು ಅವರಿಗೆ ಹೇಳಿದೆನು. ನಾನು ಬರಿಗೈದಾಸನೆಂಬುದನ್ನರಿತ ಅವರು ಅದನ್ನು ಹೊರಗೆಡುಹುವದಕ್ಕೇನು ಮಾಡುತ್ತೀಗೆಂದು ನನ್ನನ್ನು ಕೇಳಿದರು. ಯಾರಾದರೂ ಒತ್ತಾಸೆಯನ್ನು ಕೊಟ್ಟರೆ ಪ್ರಕಟಿಸುತ್ತೇನೆಂದೂ ಇಲ್ಲವಾದರೆ ಮುದುರಿಡುತ್ತೇನೆಂದೂ ಹೇಳುತ್ತ ಅನ್ನದಾನ ಮೊದಲಾದವುಗಳಿಗಿಂತ ಜ್ಞಾನದಾನಮಾಡುವ ಧಾರ್ಮಿಕಗ್ರಂಥಪ್ರಸಾರವು ಹೆಚ್ಚಿನ ಧರ್ಮವೆಂಬರ್ಥವನ್ನು ಸ್ವಲ್ಪ ಮಟ್ಟಿಗೆ ವಿವರಿಸಿದೆನು. ಸ್ವಭಾವವಾಗಿ ಧರ್ಮಾಭಿಮಾನವುಳ್ಳ ಅವರಿಗೆ ಈ ಗ್ರಂಥವನ್ನು ಪ್ರಚಾರಮಾಡಿದ ಶ್ರೇಯಸ್ಸನ್ನು ತಮ್ಮ ಮಡಿಲಿಗೆ ಹಾಕಿಕೊಳ್ಳಬೇಕೆಂಬ ಮನಸ್ಸಾಯಿತೆಂದು ತೋರುತ್ತದೆ. ಒಡನೆ ಅವರು ತಾವಾಗಿಯೇ ಇದರ ಪ್ರಕಾಶಕರಾಗುತ್ತೇವೆಂದು ಉತ್ಸಾಹಗೊಂಡರು. ಅದು ದೇವರ ಅನುಗ್ರಹದಿಂದ ಈ ರೀತಿಯಲ್ಲಿ ನೆರವೇರಿತು.

ದೇವತಾಪ್ರತಿಷ್ಠೆಯೆಂಬದೊಂದು ಹೆಚ್ಚಿನ ಧರ್ಮಕಾರ್ಯವೆಂದು ಎಲ್ಲರೂ ತಿಳಿದಿರುವರಷ್ಟೆ. ಹೊರಗೆ ಗುಡಿಗಳಲ್ಲಿ ನೆಲೆಗೊಳಿಸಿದ ದೇವರುಗಳು ಕೆಲವು ಕಾಲದ ಮೇಲೆ ದಿನದಿನಕ್ಕೆ ಕಳೆಗಳನ್ನು ಕಳೆದುಕೊಂಡು ಅನ್ನನೀರಿಲ್ಲದೆ ಒಣಗುವದನ್ನು ನಾವು ಎಷ್ಟೋ ಕಡೆ ನೋಡುತ್ತಿದ್ದೇವೆ. ಮನುಷ್ಯನ ಹೃದಯದಲ್ಲಿ ಮಾಡಿದ ಈ ಬ್ರಹ್ಮಪ್ರತಿಷ್ಠೆಯು ದಿನದಿನಕ್ಕೆ ಕಳೆಗೂಡುತ್ತ ಎಂದೆಂದಿಗೂ ಊರ್ಜಿತವಾಗಿರುವಂಥದ್ದು. ಇದೇ ನಿಜವಾದ ದೇವತಾಪ್ರತಿಷ್ಠೆ. ಇಂಥ ಶಾಶ್ವತವಾದ ಧರ್ಮಕಾರ್ಯದಲ್ಲಿ ವಿವೇಕದಿಂದ ಗುಣಗ್ರಹಣಮಾಡಿ ಮುಂದೆ ಬಂದ ಈ ಪ್ರಕಾಶಕರಿಗೆ ದೇವರು ಸರ್ವಶ್ರೇಯಸ್ಸನ್ನೂ ಉಂಟುಮಾಡಲೆಂದು ಹಾರೈಯಿಸುತ್ತೇನೆ. ಈ ಬಗೆಯ ಧರ್ಮಕಾರ್ಯವು ಪ್ರತ್ಯಕ್ಷವಾಗಿ ಮನಸ್ಸನ್ನು ಉಲ್ಲಾಸಗೊಳಿಸುವಷ್ಟು ಜನರಿಂದ ಹೊಗಳಿಕೆಯನ್ನು ಪಡೆಯದಿದ್ದರೂ ಈಶ್ವರನಿಗೆ ಪ್ರೀತಿಯಾಗುವ ಸಾತ್ವಿಕಸ್ವಭಾವದ್ದಾದ್ದರಿಂದ ಇದರ ಫಲವಾದ ಶ್ರೆಯಸ್ಸು ಪ್ರಕಾಶಕರನ್ನು— ಅವರಿಗೆ ಅರಿವಿಲ್ಲದಂತೆ— ತಾನಾಗಿಯೇ ಬಂದು ಸೇರಿಯೇ ಇರುವದು. ಸಾತ್ತ್ವಿಕವಾದ ದಾನವನ್ನು ಮಾಡುವದರಲ್ಲಿಯೂ ಆಡಂಬರವಿರುವದಿಲ್ಲ. ಅದರ ಫಲವು ಬರುವದರಲ್ಲಿಯೂ ಆಡಂಬರ

ವಿರುವದಿಲ್ಲ. ಹೀಗಿರುವದರಿಂದ ಇಲ್ಲಿ ನಾನು ಶ್ರೇಯಸ್ಸನ್ನು ಹಾರಯಿಸಿಕುವದು ಬರೀ ಲೋಕಮರ್ಯಾದೆಯ ಮಾತೆಂದು ತಿಳಿಯಬೇಕು.

ಇನ್ನೊಂದು ಮಾತು ಹೇಳಬೇಕಾಗಿದೆ. ಸಾಮಾನ್ಯರಂತೆ ಇವರು ವ್ಯಾಪಾರದ ದೃಷ್ಟಿಯಿಂದ ಆದ ಪ್ರಕಾಶಕರಲ್ಲ. ಹೆಚ್ಚು ಜನರು ಇದನ್ನು ಓದಿ ತಮ್ಮ ಹೃದಯದಲ್ಲಿರುವ ದೇವರನ್ನು ಕಂಡು ತಮ್ಮ ಜನ್ಮವನ್ನು ಸಾರ್ಥಕಮಾಡಿಕೊಂಡರೆ ಈ ಪ್ರಕಾಶಕರು ಅದೇ ತಮಗೆ ದೊಡ್ಡ ಲಾಭವೆಂದು ತಿಳಿಯುವರು. ಆದ್ದರಿಂದ ಎಲ್ಲರಿಗೂ ಅಗ್ಗವಾಗಿ ದೊರೆಯಲೆಂದು ಈ ಪುಸ್ತಕಕ್ಕೆ ಬಹಳ ಕಡಿಮೆಯ ಬೆಲೆಯನ್ನಿಟ್ಟಿರುವರು. ನಿಜವಾಗಿ ನೋಡಿದರೆ ನಮ್ಮ ದೇಶದಲ್ಲಿ ಎಷ್ಟೇ ಬಡತನವಿದ್ದರೂ ಇಷ್ಟು ಕಡಿಮೆಯ ಬೆಲೆಯ ಗ್ರಂಥವನ್ನು ಕೊಂಡುಕೊಳ್ಳಲಾರದಷ್ಟು ಬಡವರು ಓದುಬರೆಹ ಬಲ್ಲವರಲ್ಲಿ ಬಹು ಕಡಿಮೆ. ಏಕೆಂದರೆ ಕಾಫಿ, ಬೀಡಿ– ಮೊದಲಾದ ಚಟದ ವಸ್ತುಗಳಿಗೆ ಜನರು ತಮ್ಮ ಹಣವನ್ನು ನೀರಿನಂತೆ ಹಗಿಸುತ್ತಿರುವದನ್ನು ನಾವು ನೋಡುತ್ತಿದ್ದೇವೆ. ಆದ್ದರಿಂದ ಮನಸ್ಸೊಂದಿದ್ದರೆ ಇದಕ್ಕೆ ಬೆಲೆಯನ್ನು ಕೊಡುವದೊಂದು ದೊಡ್ಡಮಾತಲ್ಲ. ಇದಕ್ಕೆ ಕೊಟ್ಟ ಬೆಲೆಯ ಹಣವು ಇದರಂಥ ಇನ್ನೊಂದು ಗ್ರಂಥವನ್ನು ಹೊರಕ್ಕೆ ತರುವದಕ್ಕೆ ಉಪಯೋಗವಾಗುವದರಿಂದ ಧರ್ಮಗ್ರಂಥಗಳ ಪ್ರಸಾರಕ್ಕೆ ಅದು 'ಅಳಿಲ ಭಕ್ತಿಯ ಮಳಲ ಸೇವೆ' ಎಂಬಂತೆ ನೆರವಾಗುವದು. ಆದ್ದರಿಂದ ವಾಚಕರು ಅಗತ್ಯವಾಗಿ ಇದನ್ನು ಕೊಂಡುಕೊಂಡು ಓದಬೇಕು. ವಿಷಯವು ಧಾರ್ಮಿಕವಾದ್ದರಿಂದ ಮನಸ್ಸಿಗೆ ಒಮ್ಮೆಗೇ ಬೇಗ ಹಿಡಿಯದಿರಬಹುದು. ಆದಗೂ ಪ್ರಯತ್ನಪೂರ್ವಕವಾಗಿ ಒಗ್ಗಿಸಿಕೊಂಡು ಮತ್ತೆ ಮತ್ತೆ ಓದಿದಷ್ಟೂ ಇದು ತನ್ನ ರಸವಾದ ಅಮೃತವನ್ನು ಕಬ್ಬಿನಂತೆ ಹೆಚ್ಚು ಹೆಚ್ಚು ಸುರಿಸುವದು.

ಮನೋಹರವಾದ ಮಾತುಗಾರಿಕೆಯ ರೂಪದಲ್ಲಿರುವ ಇದು ಚೆನ್ನಾಗಿ ಹರಡಿದರೆ ಸಾಕೆಂಬ ಧರ್ಮದೃಷ್ಟಿಯಿಂದ ಅಂಚೆಯ ವೆಚ್ಚವನ್ನು ಇದರ ನಿಧಿಯೇ ಹೊರುವಂತೆ ಪ್ರಕಾಶಕರು ಲೇಖಕರ ಮೂಲಕವಾಗಿ ಅನುಕೂಲಗೊಳಿಸಿರುತ್ತಾರೆ. ಆದ್ದರಿಂದ ಪರಸ್ಥಳದವರು ಲೇಖಕರಿಗೆ ಬರೆದು ಅಗತ್ಯವಾಗಿ ಈ ಹೆಚ್ಚಿನ ಸೌಕರ್ಯವನ್ನು ಉಪಯೋಗಮಾಡಿಕೊಂಡಾದರೂ ಎಲ್ಲರೂ ಈ ಗ್ರಂಥಕ್ಕೆ ಕೈನೀಡಬೇಕು.

'**ಗೀತೆ**' ಎಂಬುದು ನಮಗೆ ದೇವರ ವರವಾಗಿ ಒಂದಿರುವ ಜ್ಞಾನಭಂಡಾರ. ಈ ನಮ್ಮ ಪುಟ್ಟಗ್ರಂಥವು ಅದರ ಬೀಗದ ಕೈ. ಇದರ ಮೂಲಕ ಅದರಲ್ಲಿರುವ ನವರತ್ನಗಳನ್ನು ಸೂರೆಗೊಳ್ಳಬಹುದು. ನಮಗೆ ಈಗ ಇರುವ ಬಡತನಕ್ಕೆಲ್ಲ ಈ ಆಸ್ತಿಯ ಪಾಲನ್ನು ನಾವು ಪಡೆಯದಿರುವದೇ ಕಾರಣ. ನಾವು ಶಾಶ್ವತವಾದ ತೃಪ್ತಿ

ಯನ್ನು ಹೊಂದಿ ನಮ್ಮ ಪೂರ್ವಿಕರ ಹೊಟ್ಟೆಯಲ್ಲಿ ಹುಟ್ಟಿದವರೆನಿಸಿಕೊಳ್ಳಬೇಕಾದರೆ ಅಗತ್ಯವಾಗಿ ಈ ಐಶ್ವರ್ಯವನ್ನು ಹೊಂದಿ ನಮ್ಮ ಬಡತನವನ್ನು ಇಂಗಿಸಿಕೊಳ್ಳಬೇಕು. ಹೀಗಾಗಿ ತಮ್ಮ ಮಕ್ಕಳು ನಿತ್ಯಾನಂದಭರಿತರಾಗಲೆಂದೇ ನಮ್ಮ ಪೂರ್ವಿಕರು ಕ್ಷುದ್ರವಾದ ಇಂದ್ರಿಯಾರ್ಥಗಳ ಮೇಲಿನ ವೈರಾಗ್ಯವನ್ನುಪದೇಶಮಾಡಿರುತ್ತಾರೆ. ಈ ವೈರಾಗ್ಯವು ಬಡತನದ ಬುಡವನ್ನು ಹಿಡಿಯುವದಕ್ಕೆ ಇಳಿಯುವ ಹಳ್ಳವಲ್ಲ; ಸಿರಿತನದ ತುಟ್ಟತುದಿಗೇರುವ ಮೆಟ್ಟಿಲು. ಈ ಗುಟ್ಟನ್ನು ತಿಳಿಯದೆ ನಾವು ನಿತ್ಯಾನಂದದ ಮೇಲೆಯೇ ವೈರಾಗ್ಯವನ್ನು ಹೊಂದಿರುವದು ತೀರ ಅಡ್ಡದಾರಿಯನ್ನು ಹಿಡಿದಂತಾಗಿದೆ. ಸರಿಯಾದ ದಾರಿಗೆ ತಿರುಗುವಂತೆ ಮಾಡುವದು ಈ ಗ್ರಂಥದ ಉದ್ದೇಶ. ಈ ಉದ್ದೇಶವನ್ನು ಸಾರ್ಥಕಗೊಳಿಸುವದು ವಾಚಕರ ಕೈಯಲ್ಲಿದೆ.

ಈ ವರ್ಷದ ಗೀತಾಜಯಂತಿಯ (ಮಾರ್ಗಶಿರ ಶು. ೧೧) ದಿನ ಇದನ್ನು ಬೆಳಕಿಗೆ ತರಬೇಕೆಂಬ ನನ್ನ ಉದ್ದೇಶಕ್ಕೆ ನೆರವಾಗಿ ಇದನ್ನು ಕಾಲಕ್ಕೆ ಸರಿಯಾಗಿಯೂ ಮುದ್ದಾಗಿಯೂ ಮುದ್ರಿಸಿಕೊಟ್ಟ ಅಧ್ಯಾತ್ಮಪ್ರಕಾಶಮುದ್ರಣಾಲಯದ ಯಜಮಾನರಾದ ಶ್ರೀಯುತ ಯಳ್ಳಂಬಳಸೆ ನರಸಪ್ಪನವರಿಗೆ ನಾನು ಕೃತಜ್ಞನಾಗಿದ್ದೇನೆ.

ಪ್ರಜೋತ್ಪತ್ತಿ
ಗೀತಾಜಯಂತಿ

ಹೊಸಕೆರೆ ಚಿದಂಬರಯ್ಯ

* ಶ್ರೀಗುರುಭ್ಯೋ ನಮಃ *

# ಗೀತೆಯ ತಿರುಳು

[ ಕುರುಕ್ಷೇತ್ರದಲ್ಲಿ ಪಾಂಡವರ ಮತ್ತು ಕೌರವರ ಸೇನೆಗಳ ನಡುವೆ
ಅರ್ಜುನನಿಗೂ ಶ್ರೀಕೃಷ್ಣನಿಗೂ ನಡೆದ ಮಾತುಗಾರಿಕೆ ]

—*0*—

## —ಗೀತೆ ಹುಟ್ಟಿದ ಸಂದರ್ಭ—

**ಅರ್ಜುನ**—ಕೃಷ್ಣ, ಗುರುಹಿರಿಯರೂ ಬಂಧುಬಳಗದವರೂ ಹೋರಾಡುವದಕ್ಕೆ ನಿಂತಿರುವದನ್ನು ನೋಡಿ ನನಗೆ ವ್ಯಸನದುಃಖ ಉಂಟಾಗಿದೆ. ಅವರನ್ನು ಕೊಂದು ಪಡೆಯುವ ರಾಜ್ಯವನ್ನು ನಾನೊಲ್ಲೆ. ಇದರಿಂದ ನನಗೆ ಪಾಪವೇ ಬಂದೀತು. ಇವರನ್ನು ಕೊಂದು ಸುಖದಿಂದ ಮೆರೆಯುವದಕ್ಕಿಂತ ತಿರಿದು ತಿನ್ನುವದಾದರೂ ಲೇಸೆನಿಸುತ್ತದೆ. ಇದರ ಮೇಲೆ ನಮಗೆ ಗೆಲುವಾಗುವದೋ ಸೋಲಾಗುವದೋ ಹೇಳುವದಕ್ಕೆ ಬರದು. ಆದ್ದರಿಂದ ಈಗ ನನಗೆ ಏನೂ ತೋರದಾಗಿದೆ. ನಾನು ನಿನ್ನನ್ನು ಶಿಷ್ಯನಾಗಿ ಕೇಳಿಕೊಳ್ಳುತ್ತೇನೆ. ಈಗ ನಾನು ಏನು ಮಾಡಬೇಕೆಂಬುದನ್ನು ಹೇಳು.

**ಕೃಷ್ಣ**— ಅರ್ಜುನ, ತಿಳಿದವರೆನಿಸಿಕೊಂಡವರು ಆಡುವಂತೆ ವಿವೇಕದ ಮಾತಾಡುತ್ತಿ. ಆದರೆ ತಿಳಿದವರು ಸತ್ತವರ ವಿಷಯಕ್ಕಾಗಲಿ ಸಾವಿಗೆ ಹತ್ತಿರವಾಗುತ್ತಿರುವವರ ವಿಷಯಕ್ಕಾಗಲಿ ಅಳುವದಿಲ್ಲ. ನನ್ನವರೆಲ್ಲ ಸಾಯುವರೆಂದು ನೀನು ಅಳುತ್ತೀಯಲ್ಲ! ಇದು ಎಂಥ ದಡ್ಡತನ!!

**ಅ.**— ಸತ್ತವರ ವಿಷಯದಲ್ಲಿ ಅಳಬಾರದೆಂಬ ಮಾತು ಹೇಗೆ ಒಪ್ಪುತ್ತದೆ?

## —ಆತ್ಮನಿಗೆ ಹುಟ್ಟುಸಾವುಗಳಿಲ್ಲ—

**ಕೃ.**— ಹೇಗೆಂದರೆ ಯಾರಿಗೂ ಸಾವೆಂಬುದೇ ಇಲ್ಲವಾದ್ದರಿಂದ. ನಾನೂ ನೀನೂ ಎಲ್ಲರೂ ಹಿಂದೆ ಇಲ್ಲದೆ ಇರಲೂ ಇಲ್ಲ; ಮುಂದೆ ಇಲ್ಲದೆ ಹೋಗುವದೂ ಇಲ್ಲ. ಎಲ್ಲರೂ ಯಾವಾಗಲೂ ಇರುವವರೆ.

**ಅ.**— ಅದು ಹೇಗೆ? ಸಾಯುವದೂ ಹುಟ್ಟುವದೂ ನಮಗೆ ಕಾಣುತ್ತಿರುವದಕ್ಕೇನು ಹೇಳುತ್ತಿ?

**ಕೃ.**—ಸಾಯುವದೂ ಹುಟ್ಟುವದೂ ದೇಹಕ್ಕೆ ಸಂಬಂಧಪಟ್ಟದ್ದು. ದೇಹವೇ ನಾವಲ್ಲ. ಗಡಿಗೆಯು ಒಡೆದುಹೋದರೂ ಗಡಿಗೆಯ ಬಯಲು ನಾಶವಾಗದೆ ಇರುವಂತೆ ನಮ್ಮ ದೇಹಗಳು ಹೋದರೂ ನಮ್ಮ ಆತ್ಮಕ್ಕೆ ನಾಶವಿಲ್ಲ. ನಾವು ಆತ್ಮರೂಪದಿಂದ ಯಾವಾಗಲೂ ಇರತಕ್ಕವರೆ. ನಾವೆಂಬ ಬಹುವಚನದ ಮಾತು ಕೂಡ ದೇಹವನ್ನು ಲಕ್ಷ್ಯದಲ್ಲಿಟ್ಟುಕೊಂಡು ಅನುವ ಮಾತು. ಆತ್ಮನು ಯಾವಾಗಲೂ ಅಖಂಡನಾದ ಒಬ್ಬನೆ.

**ಅ.**— ದೇಹವು ಸತ್ತರೂ ನಾವು ಇದ್ದೇ ಇರುವೆವೆಂಬದನ್ನು ತಿಳಿಯುವದು ಕಷ್ಟವಾಗಿದೆಯಲ್ಲ!

**ಕೃ.**— ನಮಗೆ ಅದರ ತಿಳಿವು ಉಂಟೆಂಬದನ್ನು ದೃಷ್ಟಾಂತದಿಂದ ತಿಳಿಸುತ್ತೇನೆ; ನೋಡು. ನಾವು ಒಂದೇ ದೇಹದಲ್ಲಿರುವಾಗಲೇ ಕೆಲವು ಕಾಲ ಹುಡುಗತನ, ಕೆಲವು ಕಾಲ ಹರೆಯತನ, ಕೆಲವು ಕಾಲ ಮುದುಕತನ— ಹೀಗೆ ಬೇರೆ ಬೇರೆ ಅವಸ್ಥೆಗಳಾಗಿ ಹೋಗುವದಿಲ್ಲವೆ? ಅವುಗಳಲ್ಲಿ ಮೊದಲನೆ ಅವಸ್ಥೆ ಹೋದ ಮಾತ್ರಕ್ಕೇ ನಾವು ಸತ್ತವರಾಗುವದಿಲ್ಲ; ಎರಡನೆ ಅವಸ್ಥೆ ಹುಟ್ಟಿದ ಮಾತ್ರಕ್ಕೇ ನಾವು ಹುಟ್ಟಿದವರಾಗುವದಿಲ್ಲ. ಹೀಗೆ ಒಂದೇ ದೇಹದಲ್ಲಿ ಬೇರೆ ಬೇರೆ ಅವಸ್ಥೆಗಳ ಬದಲಾವಣೆಗಳು ಕಂಡರೂ ನಾವು ಬದಲಾಗದೆ ಇರುವಂತೆ ಈ ದೇಹವು ಹೋಗಿ ಇನ್ನೊಂದು ದೇಹವು ಬಂದರೂ ನಾವು ಬದಲಾಗದೆ ಇರುವೆವು. ಆದ್ದರಿಂದ ತಿಳಿದವರು ಸಾವೆಂದರೆ ದೇಹದ ಬದಲಾವಣೆಯೆಂದರಿತು ಆತ್ಮನು ಸತ್ತನೆಂದು ಅಳುವದಿಲ್ಲ.

**ಅ.**—ಆತ್ಮನು ಹಾಗೆ ಯಾವಾಗಲೂ ಏಕರೀತಿಯಾಗಿ ಇದ್ದೇ ಇರು

ವನೆಂದು ತಿಳಿದವರು ಅಳದೆ ಹೋದರೂ ದೇಹಕ್ಕೆ ಧಕ್ಕೆ ಒದಗಿದಾಗ ಲೋಕದಲ್ಲಿ ಯಾರಿಗೆ ತಾನೆ ದುಃಖವಾಗದೆ ಇರುತ್ತದೆ?

**ಕೃ.**— ನಿಜ. ಮನುಷ್ಯನು ತನ್ನ ದೇಹಕ್ಕೆ ಹೊಂದಿದ ವಿಷಯಗಳ ಸೋಂಕಿನಿಂದ ಸುಖವಾದಾಗ ಹಿಗ್ಗುತ್ತಾನೆ; ದುಃಖವಾದಾಗ ತಗ್ಗುತ್ತಾನೆ. ಆ ಸೋಂಕುಗಳೂ ಸುಖದುಃಖಗಳೂ ನೆಲೆಯಾಗಿರತಕ್ಕವುಗಳಲ್ಲ. ಆದ್ದರಿಂದ ವಿವೇಕಿಯಾದವನು ಅವುಗಳಿಂದ ಹಿಗ್ಗಲೂ ಬಾರದು; ತಗ್ಗಲೂ ಬಾರದು; ಸುಮ್ಮನೆ ಸಹಿಸಬೇಕು.

**ಅ.**— ಹಾಗೇಕೆ ಸಹಿಸಬೇಕು?

**ಕೃ.**— ಏಕೆಂದರೆ ಅದಕ್ಕೆ ಎರಡು ಕಾರಣಗಳನ್ನು ಹೇಳುತ್ತೇನೆ; ಕೇಳು. (೧) ಆತ್ಮನು ಯಾವಾಗಲೂ ಏಕರೀತಿಯಾಗಿ ಇರುವವನೆಂಬುದರ ಕಡೆಗೆ ಲಕ್ಷ್ಯವನ್ನು ಕೊಟ್ಟು ಸುಖದುಃಖಗಳನ್ನು ಸುಮ್ಮನೆ ಸಹಿಸುವವನು ಮೋಕ್ಷಕ್ಕೆ ತಕ್ಕವನಾಗುತ್ತಾನೆ. (೨) ದೇಹಾದಿಗಳೂ ಸುಖದುಃಖಾದಿಗಳೂ ಯಾವಾಗಲೂ ಇರತಕ್ಕವುಗಳಲ್ಲವೆಂಬುದು ನಮಗೆ ಪ್ರತ್ಯಕ್ಷವಾಗಿದೆಯಷ್ಟೆ. ಆದ್ದರಿಂದ ಅವು ಸುಳ್ಳಾದವುಗಳು. ಏಕೆಂದರೆ ಜಗತ್ತಿನಲ್ಲಿ ಇರುವದೆನಿಸಿಕೊಳ್ಳುವ ವಸ್ತು ಹೋಗುವದೇ ಇಲ್ಲವೆಂದೂ ಹೋಗುವ ವಸ್ತುಗಳಿಗೆ ಇರುವಿಕೆಯೇ ಇಲ್ಲವೆಂದೂ ತಿಳಿದವರು ಗೊತ್ತುಮಾಡಿರುವರು. ಈ ಗುಟ್ಟನ್ನು ತಿಳಿದು ನೀನೂ ಸುಖ, ದುಃಖ— ಮೊದಲಾದವುಗಳನ್ನು ಬಿಸಿಲುಗುದುರೆಯಂತೆ ಸುಳ್ಳಾದುವೆಂದರಿತು ಸುಮ್ಮನೆ ಸಹಿಸು.

**ಅ.**— ಯಾವಾಗಲೂ ಇರುವದೆಂಬುದು ಯಾವದು?

**ಕೃ.**—ಅದು ಗಡಿಗೆಗಳಲ್ಲೆಲ್ಲ ತುಂಬಿರುವ ಆಕಾಶದಂತೆ ಎಲ್ಲೆಲ್ಲಿಯೂ ತುಂಬಿದೆ. ಅದು ಎಂದೂ ಹೋಗತಕ್ಕದ್ದೇ ಅಲ್ಲ. ಅದನ್ನು ಇಲ್ಲದಂತೆ ಮಾಡುವದಕ್ಕೆ ಯಾರಿಗೂ ಸಾಧ್ಯವಿಲ್ಲ. ಏಕೆಂದರೆ ವಿಷ್ಣು ತನ್ನನ್ನು ಕೊಲ್ಲುವದಕ್ಕೆ ಬಂದ ಹಿರಣ್ಯಕಶಿಪುವಿನ ಒಳಹೊಕ್ಕಿದ್ದಂತೆ ಅದು ಹಾಗೆ ಮಾಡ ಹೋಗುವವನ ಆತ್ಮವಾಗಿಯೇ ಇರುವದು. ದೇಹ ಮೊದಲಾದವುಗಳಿಗಿರುವಂತೆ ಅದಕ್ಕೆ ಅವಯವಗಳಿಲ್ಲದ್ದರಿಂದ ಅದು ಬದಲಾವಣೆಯನ್ನು ಹೊಂದತಕ್ಕದ್ದಲ್ಲ. ಆದ್ದರಿಂದ ಅದಕ್ಕೆ ನಾಶವಿಲ್ಲ. ಅದು ಎಲ್ಲರ ಆತ್ಮ. ಅದೇ ಬ್ರಹ್ಮ.

**ಅ.**— ಬದಲಾವಣೆಯನ್ನು ಹೊಂದತಕ್ಕವು ಯಾವವು?

**ಕೃ.**— ದೇಹಗಳು. ಈ ದೇಹಗಳು ಬಿಸಿಲುಗುದುರೆಯಂತೆ ಕನಸಿನ ಮತ್ತು ಮಾಯೆಯ ವಸ್ತುಗಳಂತೆ ಇಲ್ಲದೆ ಹೋಗುವವುಗಳು.

**ಅ.**— ಆತ್ಮನೆಂಬ ವಸ್ತು ನಮಗೆ ಕಾಣುವದಿಲ್ಲವಲ್ಲ!

**ಕೃ.**— ಆತ್ಮನು ಕಣ್ಣಿಗೆ ಕಾಣಬರುವವನಲ್ಲ. ಅವನು ನೋಡುವವನು. ಅವನನ್ನು ವೇದವು ಕೂಡ ಬಿಟ್ಟಿಟ್ಟು ತೋರಿಸಲಾರದು. ಏಕೆಂದರೆ ಅವನು ಅದಕ್ಕಿಂತ ಹಿಂದಿನವನು. ಈ ಆತ್ಮನು ಯಾರಿಗೂ ಗೊತ್ತಾಗದೆ ಇರುವವನೂ ಅಲ್ಲ. ಪ್ರತಿಯೊಬ್ಬರಿಗೂ 'ನಾನು, ತಾನು' ಎಂಬ ಸಾಮಾನ್ಯರೂಪದಲ್ಲಿ ಗೊತ್ತಾಗಿರುವನು. ಆದರೆ ಅದರ ಸ್ವರೂಪದ ವಿಷಯದಲ್ಲಿ ತಪ್ಪಾದ ತಿಳಿವಳಿಕೆಯಾಗಿರುವದುಂಟು. ಹೇಗೆಂದರೆ ದೇಹವು ಅವಸ್ಥೆಗಳಿಂದ ಬದಲಾದರೂ ದೇಹದೊಳಗೆ ನಾವು ಏಕರೂಪವಾಗಿರುವೆವಷ್ಟೆ. ಇದರಿಂದ ದೇಹವೇ ನಾವಲ್ಲವೆಂದು ಗೊತ್ತಾಗುವದು. ಆದರೂ ಮನುಷ್ಯನು ದೇಹ, ಇಂದ್ರಿಯ-ಮೊದಲಾದವುಗಳನ್ನೆ ತಪ್ಪಾಗಿ ನಾನೆಂದು ವ್ಯವಹರಿಸುವನು. ವೇದವು ಆ ತಪ್ಪುತಿಳಿವಳಿಕೆಯನ್ನು ಕಳೆಯುವದೇ ಹೊರತು ಇಲ್ಲದ್ದನ್ನೇನೂ ಉಂಟುಮಾಡಿ ಕೊಡುವದಿಲ್ಲ. ಹೀಗೆ ಆತ್ಮನು ನಾಶವಾಗತಕ್ಕವನಲ್ಲವಾದ್ದರಿಂದ, ಅರ್ಜುನ, ಯುದ್ಧಕ್ಕೆ ಬಂದಿರುವ ನೀನು ಏಳು; ಯುದ್ಧವನ್ನು ಮಾಡು. ದೇಹದ ಸಾವನ್ನು ಆತ್ಮನ ಸಾವೆಂದು ತಿಳಿಯುವದು ದಡ್ಡತನ. ಆತ್ಮನು ಸಾಯುವದೂ ಇಲ್ಲ; ಕೊಲ್ಲುವದೂ ಇಲ್ಲ. ಹುಟ್ಟು, ಸಾವು- ಮೊದಲಾದ ಯಾವ ಬದಲಾವಣೆಯೂ ಇಲ್ಲದ ಆತ್ಮನು ಯಾರನ್ನು ಹೇಗೆ ಹೊಡೆದಾನು? ಮತ್ತು ಯಾರನ್ನು ಹೇಗೆ ಕೊಂದಾನು?

**ಅ.**— ಬೇರೆ ಬೇರೆ ದೇಹಗಳನ್ನು ಪಡೆಯುವ ಆತ್ಮನು ಬದಲಾವಣೆಗಳಿಲ್ಲದವನೆಂಬ ಅಭಿಪ್ರಾಯವೇ ಮನಸ್ಸಿಗೆ ಹಿಡಿಯಲೊಲ್ಲದಲ್ಲ!

**ಕೃ.**— ಅದು ಹಿಡಿಯುವಂತೆ ದೃಷ್ಟಾಂತವನ್ನು ಕೊಡುತ್ತೇನೆ; ಕೇಳು. ಮನುಷ್ಯನು ಹಳೆಯ ಅರಿವೆಗಳನ್ನು ಕಿತ್ತೊಗೆದು ಹೊಸವನ್ನು ಧರಿಸುವಂತೆ ಆತ್ಮನು ಹಳೆಯ ಶರೀರಗಳನ್ನು ಬಿಟ್ಟು ಹೊಸವನ್ನು ಒಳಹೊಗುತ್ತಾನೆ.

**ಅ.**— ಅವನಲ್ಲಿ ಬದಲಾವಣೆಗಳಾಗದೆ ಇರುವದಕ್ಕೆ ಕಾರಣವೇನು?

**ಕೃ.**— ಆವನು ಎಲ್ಲೆಲ್ಲಿಯೂ ತುಂಬಿರುವನು ನಿತ್ಯ, ಆವನು ಇನ್ನೊಂದರಿಂದ ಆದಂಥವನಲ್ಲ. ಆದ್ದರಿಂದ ಆವನಲ್ಲಿ ಬದಲಾವಣೆಗಳು ನಡೆಯುವದಿಲ್ಲ.

**ಅ.**— ಇದನ್ನು ಮನಗಾಣುವದು ಬುದ್ಧಿಗೆ ಕಷ್ಟವಾಗಿದೆ!

**ಕೃ.**— ಅರ್ಜುನ, ಇದನ್ನು ನೀನು ಮನಗಾಣಲಾರದೆ ಆತ್ಮನು ಯಾವಾಗಲೂ ಹುಟ್ಟುತ್ತಲೇ ಸಾಯುತ್ತಲೇ ಇರುವನೆಂದು ತಿಳಿದರೂ ನೀನು ಈಗ ಅಳಬಾರದಾಗುವದು. ಏಕೆಂದರೆ ಹುಟ್ಟಿದವನಿಗೆ ಸಾವು ತಪ್ಪಿದ್ದಲ್ಲ. ಸತ್ತವನಿಗೆ ಹುಟ್ಟು ತಪ್ಪಿದ್ದಲ್ಲ. ಇದಕ್ಕೇಕೆ ಅಳಬೇಕು? ಇಲ್ಲಿ ಕಾಣುವವರೆಲ್ಲ ಹುಟ್ಟುವದಕ್ಕೆ ಮುಂಚೆಯೂ ಇರಲಿಲ್ಲ; ಸತ್ತ ಮೇಲೂ ಇರುವದಿಲ್ಲ. ನಡುವೆ ಕಾಣುವವರಿಗೂ ನಿನಗೂ ಏನು ಗಂಟು? ಇದಕ್ಕೇಕೆ ಈ ಗೋಳು?

**ಅ.**— ಹೀಗೆ ನನ್ನ ವಿಚಾರದೃಷ್ಟಿಯು ಸರಿ ಹೋದ ಮೇಲೆ ತಾನೆ ನಾನು ಯುದ್ಧವನ್ನು ಮಾಡಬೇಕು?

## —ಜ್ಞಾನಕ್ಕೆ ಕರ್ಮಯೋಗವು ಸಾಧನ—

**ಕೃ.**— ಬರೀ ಅಷ್ಟೇ ಅಲ್ಲ. ಕ್ಷತ್ರಿಯನಾದ ನಿನಗೆ ಯುದ್ಧವು ಸ್ವಧರ್ಮವೆಂಬುದರ ಕಡೆ ನೋಡಿದರೂ ನೀನು ಯುದ್ಧ ಮಾಡಬೇಕಾಗುವದು. ಕಾದುವದು ನಿನ್ನ ಸ್ವಭಾವ. ಅದರಲ್ಲಿ ಗೆದ್ದು ಜನರನ್ನು ಕಾಪಾಡುವದು ನಿನ್ನ ಧರ್ಮ. ನಿನಗೆ ಇದಕ್ಕಿಂತ ಹೆಚ್ಚಿನ ಧರ್ಮವಿಲ್ಲ. ಸ್ವರ್ಗದ ಬಾಗಿಲನ್ನು ತೆರೆದು ಕೊಡುವಂಥ ಯುದ್ಧವು ನಿನ್ನ ಪುಣ್ಯದಿಂದ ತಾನಾಗಿ ಒದಗಿರುವದು. ಇದರಲ್ಲಿ ಹಿಂದೆಗೆದರೆ ನೀನು ನಿನ್ನ ಧರ್ಮವನ್ನೂ ಕಳೆದುಕೊಳ್ಳುತ್ತಿ; ಕಿರಾತರೂಪಿಯಾದ ಈಶ್ವರನೊಡನೆ ಹೋರಾಡಿ ಗೆದ್ದವನೆಂಬ ಹೆಸರುವಾಸಿಯನ್ನೂ ಅಳಿಸಿಕೊಳ್ಳುತ್ತಿ; ಕೊನೆಗೆ ನಿನ್ನ ಸೆರಗಿಗೆ ಬರೀ ಪಾಪವನ್ನೂ ಗಂಟುಹಾಕಿಕೊಳ್ಳುತ್ತಿ; ಹಗೆಗಳಿಗೆ ಹೆದರಿದನೆಂದು ಕೆಟ್ಟ ಹೆಸರನ್ನೂ ಪಡೆಯುತ್ತಿ. ಒಳ್ಳೆ ಹೆಸರನ್ನು ಕಳೆದುಕೊಂಡು ಕೆಟ್ಟ ಹೆಸರನ್ನು ಪಡೆಯುವದಕ್ಕಿಂತ ಸಾಯುವದಾದರೂ ಮೇಲು. ಕಾದುವದಕ್ಕೆ

ನಿಂತ ಮೇಲೆ ಸತ್ತರೆ ವೀರಸ್ವರ್ಗ ; ಗೆದ್ದರೆ ರಾಜ್ಯಾಧಿಪತ್ಯ. ಆದ್ದರಿಂದ ಏಳು ; ಗಟ್ಟಿಮನಸ್ಸುಮಾಡಿ ಕಾದು.

**ಅ.**— ಕೃಷ್ಣ, ಇವರನ್ನೆಲ್ಲ ಕೊಲ್ಲುವದರಿಂದ ಪಾಪವು ಗಂಟು ಬೀಳುವದೆಂದು ನನ್ನ ಮನಸ್ಸು ತಳಮಳಿಸುತ್ತಿರುವದಲ್ಲ !

**ಕೃ.**— ನಿನಗೆ ಪಾಪವು ತಟ್ಟದಂತೆ ಉಪಾಯವನ್ನು ಹೇಳುತ್ತೇನೆ. ಅದೇನೆಂದರೆ:— ಸುಖವು ಬರಲಿ, ಅಥವಾ ದುಃಖವು ಬರಲಿ ; ಆದಾಯ ವಾಗಲಿ, ಅಥವಾ ನಷ್ಟ ವಾಗಲಿ; ಗೆಲವಾಗಲಿ, ಅಥವಾ ಸೋಲಾಗಲಿ-ಒಂದರ ಮೇಲೆ ಪ್ರೀತಿಯೂ ಇನ್ನೊಂದರ ಮೇಲೆ ಹಗೆತನವೂ ಇಲ್ಲದೆ ಕಾದು.

**ಅ.**— ಆತ್ಮನು ನಾಶವಾಗತಕ್ಕವನಲ್ಲವೆಂದು ತಿಳಿದು ಯುದ್ಧಕ್ಕೇಳೆಂದು ಮೊದಲು ಹೇಳಿದೆ. ಈಗ ಸಮತ್ವಬುದ್ಧಿಯಿಂದ ಯುದ್ಧಮಾಡೆನ್ನುತ್ತೀ. ಈ ಎರಡು ಮಾತುಗಳಲ್ಲಿ ಒಂದಕ್ಕೊಂದಕ್ಕೇನು ಸಂಬಂಧ ?

**ಕೃ.**— ಆತ್ಮನು ನಾಶವಾಗತಕ್ಕವನಲ್ಲವೆಂದು ತಿಳಿದು ಯುದ್ಧಕ್ಕೇಳೆಂಬದು ಜ್ಞಾನಯೋಗದ ಮಾತು. ಇದು ಮನುಷ್ಯನ ಶೋಕ, ಮೋಹ-ಮೊದಲಾದ ದೋಷಗಳನ್ನು ನೇರವಾಗಿ ಹೋಗಲಾಡಿಸಬಲ್ಲದು. ಆದರೆ ಈ ವಿಚಾರವು ಮೈಗೂಡುವದು ಕಷ್ಟ. ನಿನಗೆ ಅದು ಹಿಡಿಯದೆ ಇರುವದನ್ನು ನೋಡಿಯೇ ನಾನು ಸಮತ್ವಬುದ್ಧಿಯಿಂದ ಯುದ್ಧಮಾಡೆಂದು ಈಗ ಹೇಳಿದೆನು. ಸಮತ್ವಬುದ್ಧಿಯಿಂದ ಮಾಡುವ ಕರ್ಮವು ಮನಸ್ಸಿನ ಹೊಲಸನ್ನು ಕಳೆದು ಜ್ಞಾನಯೋಗವನ್ನು ಗ್ರಹಿಸುವ ಸಾಮರ್ಥ್ಯವನ್ನು ತಂದುಕೊಡುವ ಸಾಧನವು. ಇದಕ್ಕೆ **ಕರ್ಮಯೋಗ**ವೆಂದು ಹೆಸರು. ಕರ್ಮಗಳಿಂದ ಸಾಮಾನ್ಯವಾಗಿ ಪಾಪವೊ ಪುಣ್ಯವೊ ಏನಾದರೊಂದು ಬಂದೇ ಬರುವದಷ್ಟೆ. ಕರ್ಮಗಳನ್ನು ಸಮತ್ವಬುದ್ಧಿಯಿಂದ ಮಾಡಿದರೆ ಅದು ಯಾವ ಪುಣ್ಯಪಾಪಗಳನ್ನೂ ಬರಗೊಡುವದಿಲ್ಲ.

**ಅ.**— ಪುಣ್ಯಪಾಪಗಳನ್ನು ಬರಗೊಡದಿರುವದೊಂದೇನೊ ಅದರಲ್ಲಿ ಇನ್ನೇನಾದರೂ ಹೆಚ್ಚುಗಾರಿಕೆ ಇದೆಯೊ ?

**ಕೃ.**— ಅದೊಂದೇ ಅಲ್ಲ. (೧) ಕರ್ಮಯೋಗವು ಆರಂಭವಾದ ಮೇಲೆ ಅದು ತನ್ನ ಫಲವನ್ನು ಕೊಡದೆ ನಾಶವಾಗುವದೇ ಇಲ್ಲ. ಅದನ್ನು ಸ್ವಲ್ಪ ಮಾಡಿದರೂ ಅದು ಮಹತ್ತಾದ ಸಂಸಾರದ ಭಯವನ್ನು ಕಳೆಯುತ್ತದೆ.

(೨) ಈ ಸಮತ್ವಬುದ್ಧಿಯು ಮನಸ್ಸನ್ನು ಒಮ್ಮುಖವನ್ನಾಗಿ ಮಾಡುತ್ತದೆ. ಈ ಸ್ಥಿತಿಯನ್ನು ವಿವೇಕಿಗಳು ಮಾತ್ರ ಪಡೆಯುತ್ತಾರೆ.

**ಅ.**— ಅವಿವೇಕಿಗಳ ಸ್ಥಿತಿ ಹೇಗಿರುತ್ತದೆ?

**ಕೃ.**— ಅವರು ಕಿವಿಗಿಂಪಾಗಿ ಬಗೆಬಗೆಯ ಫಲಗಳನ್ನು ಹೇಳುವ ವೇದದ ಮಾತುಗಳಿಗೆ ಮರುಳಾಗಿ ಬುದ್ಧಿಗೆಟ್ಟು ಕರ್ಮಗಳಿಗೆ ಸ್ವರ್ಗ, ಐಶ್ವರ್ಯ— ಮೊದಲಾದವುಗಳ ಹೊರತು ಬೇರೆ ಫಲವೇ ಇಲ್ಲವೆಂದು ತಿಳಿದು ಅವುಗಳನ್ನು ಪಡೆಯುವದಕ್ಕಾಗಿ ಹುಟ್ಟುಸಾವುಗಳನ್ನು ಕೊಡುವಂಥ ಬಗೆಬಗೆಯ ಕರ್ಮಗಳಲ್ಲಿ ತೊಡಗುತ್ತಾರೆ. ಅವರ ಮನಸ್ಸು ಹೀಗೆ ಹರಿದಾಡುವದರಿಂದ ಒಮ್ಮುಖವಾಗುವದಿಲ್ಲ. ವೇದದಲ್ಲಿ ಬಗೆಬಗೆಯ ಫಲಗಳನ್ನು ಹೇಳಿ ಬಾಯಿನೀರುಕರಿಸುವ ಮಾತುಗಳೆಲ್ಲ ಸತ್ತ್ವ, ರಜ, ತಮ— ಎಂಬ ಮೂರು ಗುಣಗಳಿಂದ ಕೂಡಿದ ಸಂಸಾರಕ್ಕೆ ಸಂಬಂಧವಾದವುಗಳು. ನೀನು ಆ ಫಲಗಳನ್ನು ಬಯಸಬೇಡ.

**ಅ.**— ವೇದದಲ್ಲಿ ಹೇಳಿರುವ ಕರ್ಮಗಳ ಫಲಗಳನ್ನು ಬಯಸಬಾರದೆಂದರೆ ಈಶ್ವರನಿಗೆ ಪ್ರೀತಿಯಾಗಲೆಂದು ಅವುಗಳನ್ನೇಕೆ ಮಾಡಬೇಕು?

**ಕೃ.**— ಅರ್ಜುನ, ಬಯಸಿದರೆ ಬಯಸಿದಷ್ಟು ಮಾತ್ರ ಬರುತ್ತದೆ. ಬಯಸದಿದ್ದರೆ ಜ್ಞಾನವಾಗಿ ಸರ್ವಫಲಗಳೂ ಬಂದಂತಾಗುತ್ತವೆ. ಲೋಕದಲ್ಲಿ ಒಂದು ಸಣ್ಣ ಬಾವಿಯ ನೀರಿನಿಂದ ಆಗುವ ಪ್ರಯೋಜನಗಳನ್ನೆಲ್ಲ ದೊಡ್ಡ ಜಲಾಶಯವು ಒಳಗೊಂಡಿರುವದಷ್ಟೆ, ಅದರಂತೆ ವೇದಗಳಲ್ಲಿ ಹೇಳಿರುವ ಕರ್ಮಗಳ ಫಲಗಳಿಂದ ಆಗುವ ಪ್ರಯೋಜನಗಳನ್ನೆಲ್ಲ ಆತ್ಮಜ್ಞಾನವು ಒಳಗೊಂಡಿರುವದು. ಹೀಗೆ ಜ್ಞಾನಿಯಲ್ಲಿ ಯಾವ ಕರ್ಮಫಲದ ಕೊರತೆಯೂ ಇಲ್ಲವಾದ್ದರಿಂದ ಅವನು ಕರ್ಮವನ್ನು ಮಾಡದೆ ಇರಬಹುದಾದರೂ ಜ್ಞಾನವಾಗುವದಕ್ಕೆ ಮೊದಲು— ಕರ್ಮವು ಬಾವಿಗೆ ಹೋಲುವಂಥದ್ದಾದರೂ— ಅದನ್ನು ಮಾಡಬೇಕು. ನಿನಗಿನ್ನೂ ಜ್ಞಾನವು ಹುಟ್ಟಿದಿಲ್ಲ. ನೀನಿನ್ನೂ ಕರ್ಮವನ್ನು ಮಾಡುವದಕ್ಕೇ ತಕ್ಕವನು. ಆದರೆ ಕರ್ಮಕ್ಕೆ ಫಲವನ್ನೆಂದೂ ಬಯಸಬೇಡ. ಫಲವನ್ನು ಬಯಸಿದರೆ ಅದನ್ನು ಅನುಭವಿಸಿ ತೀರಿಸುವದಕ್ಕಾಗಿ ಹುಟ್ಟಿ ಸಾಯುತ್ತಿರಬೇಕಾದೀತು. ಫಲವು ಬೇಡವಾದ ಮೇಲೆ ಕರ್ಮವಿನ್ನೇಕೆಂದು ಸುಮ್ಮನೆ ಕೂಡಲೂ ಬೇಡ.

**ಅ.**— ಫಲಕ್ಕಾಗಿ ಅಲ್ಲದ ಮೇಲೆ ಕರ್ಮವನ್ನು ಹೇಗೆ ಮಾಡಬೇಕು?

**ಕೃ.**— ಫಲದ ಬಯಕೆಯನ್ನು ಬಿಟ್ಟು ಇದರಿಂದ ಈಶ್ವರನಿಗೆ ತೃಪ್ತಿಯಾಗಲೆಂದು ಮಾಡು. ಹೀಗೆ ಕರ್ಮವನ್ನು ಮಾಡುತ್ತಿರುವ ನಿನಗೆ ಅದರ ಫಲವಾಗಿ ಚಿತ್ತಶುದ್ಧಿಯೂ ಜ್ಞಾನವೂ ಆದರೂ ಆಗದೆ ಇದ್ದರೂ ಅದನ್ನು ಲೆಕ್ಕಕ್ಕೆ ತೆಗೆದುಕೊಳ್ಳದೆ ಸಮತ್ವಬುದ್ಧಿಯಿಂದ ಮಾಡು. ಸಮತ್ವವೇ ಯೋಗ. ಫಲವನ್ನು ಗುರಿಯಾಗಿಟ್ಟುಕೊಂಡು ಮಾಡುವ ಕರ್ಮವು ಬಹು ಕೀಳು. ಅದು ಆತ್ಮಜ್ಞಾನಕ್ಕೆ ಸಾಧಕವಾಗಲಾರದು.

**ಅ.**— ಸಮತ್ವಬುದ್ಧಿಯಿಂದ ಮಾಡುವ ಸ್ವಧರ್ಮದಿಂದಾಗುವ ಫಲವೇನು?

**ಕೃ.**—ಸಮತ್ವಬುದ್ಧಿಯಿಂದ ಚಿತ್ತಶುದ್ಧಿಯಾಗಿ ಆತ್ಮಜ್ಞಾನವಾಗುವದರಿಂದ ಅವನ ಪುಣ್ಯಪಾಪಗಳ ಕಟ್ಟುಗಳೆಲ್ಲ ಕಳಚಿಕೊಂಡು ಹೋಗುವವು. ಆದ್ದರಿಂದ ನೀನು ಸಮತ್ವಬುದ್ಧಿಯ ಕರ್ಮಯೋಗವನ್ನು ಹಿಡಿ. ಸಮತ್ವವೇ ಕರ್ಮದಲ್ಲಿ ಜಾಣತನ. ಏಕೆಂದರೆ ಮನುಷ್ಯನನ್ನು ಹುಟ್ಟುಸಾವುಗಳಿಗೊಳಪಡಿಸುವದೇ ಕರ್ಮದ ಸ್ವಭಾವವಾದರೂ- ಹಣ್ಣಿನ ಹುಳಿಯನ್ನು ತೆಗೆದು ಸಿಹಿಮಾಡುವಂತೆ-ಸಮತ್ವಬುದ್ಧಿಯು ಆ ಸ್ವಭಾವವನ್ನು ಬದಲಾಯಿಸಿಬಿಡುವದು. ಸಮತ್ವವನ್ನು ಹಿಡಿದವರು ಬದುಕಿರುವಾಗಲೆ ಹುಟ್ಟುಸಾವುಗಳ ಕಟ್ಟನ್ನು ಕಳಚಿಕೊಂಡವರಾಗುವರು.

**ಅ.**— ಚಿತ್ತಶುದ್ಧಿಯಿಂದಾಗುವ ಜ್ಞಾನವು ಯಾವಾಗ ದೊರೆಯುವದು?

**ಕೃ.**— ಮನಸ್ಸು ವಿಷಯಗಳ ಕಡೆಗೆ ಹೊರಮುಖವಾಗಿ ಹರಿಯದೆ ಒಳಮುಖವಾಗುವದೇ ಚಿತ್ತಶುದ್ಧಿ. ಇದು ಮೈಗೂಡಿದಾಗ ಮನುಷ್ಯನಿಗೆ ವಿಷಯಗಳಲ್ಲಿ ವೈರಾಗ್ಯವುಂಟಾಗಿ ಕರ್ಮಫಲಗಳೆಲ್ಲ ಬೇಡವೆನಿಸುತ್ತವೆ. ಹೀಗಾಗಿ ಒಳಮುಖವಾದ ಮನಸ್ಸು ಆತ್ಮಸ್ವರೂಪದ ವಿಚಾರದಲ್ಲಿಯೇ ಒಮ್ಮುಖವಾಗಿ ಕದಲದೆ ನಿಂತಾಗ ಜ್ಞಾನವಾಗುವದು.

**ಅ.**—ಆ ಜ್ಞಾನಿಯು ಹೇಗಿರುವನು?

## —ಜ್ಞಾನಿಯ ವರ್ಣನೆ—

**ಕೃ.**—ಅದನ್ನು ಹೇಳುತ್ತೇನೆ; ಕೇಳು. ಅದನ್ನು ನೀನು ನಡೆವಳಿಕೆಗೆ ತಂದುಕೊಳ್ಳುವ ಯತ್ನವನ್ನು ಮಾಡು. ಅವನು ಮನಸ್ಸಿನ ಬಯಕೆಗಳನ್ನೆಲ್ಲ ಸಂಪೂರ್ಣವಾಗಿ ತೊರೆದಿರುವನು. ಆದರೆ ಹುಚ್ಚರಂತೆ ಕಟ್ಟು ಹರಿದವನಾಗಿ ನಡೆಯದೆ ತನ್ನ ಆತ್ಮಸ್ವರೂಪದಿಂದಲೆ ತೃಪ್ತನಾಗಿರುವನು. ಅವನ ತೃಪ್ತಿಗೆ ಹೊರಗಣ ವಿಷಯಗಳೊಂದೂ ಬೇಕಾಗುವದಿಲ್ಲ. ತನ್ನ ಆತ್ಮವು ಯಾವದೆಂಬ ಮತ್ತು ತನ್ನ ಆತ್ಮವಲ್ಲದ್ದು ಯಾವದೆಂಬ ತಿಳಿವಳಿಕೆಯು ಅವನಲ್ಲಿ ಒಂದು ಗಟ್ಟಿಯಾದ ನೆಲೆಗೆ ನಿಂತಿರುವದು. ಅವನು ಸುಖವನ್ನು ಬೇಕೆನ್ನುವದಿಲ್ಲ; ದುಃಖವನ್ನು ಬೇಡವೆನ್ನುವದಿಲ್ಲ. ಅವನಿಗೆ ಬದುಕಿರುವವರ ಮೇಲೆ ಕೂಡ ಹೆಚ್ಚಿನ ಆಸಕ್ತಿ ಇಲ್ಲ. ಅವನು ತನಗೆ ಒಳ್ಳೆಯದಾಯಿತೆಂದು ಹಿಗ್ಗುವದಿಲ್ಲ; ಕೆಟ್ಟದಾಯಿತೆಂದು ತಗ್ಗುವದಿಲ್ಲ. ಆಮೆಯು ತನ್ನ ಅವಯವಗಳನ್ನೆಲ್ಲ ಮುದುರಿಕೊಂಡಿರುವಂತೆ ಅವನು ತನ್ನ ಇಂದ್ರಿಯಗಳನ್ನೆಲ್ಲ ವಿಷಯಗಳಿಂದ ಹಿಮ್ಮೆಟ್ಟಿಸಿ ಮುದುರಿಕೊಂಡಿರುತ್ತಾನೆ.

**ಅ.**—ಇಂದ್ರಿಯಗಳನ್ನು ಮುದುರಿಕೊಳ್ಳುವಿಕೆಯು ರೋಗಿಗಳಲ್ಲಿ ಕೂಡ ಕಾಣಬರುತ್ತದಲ್ಲ! ಅವರಿಗೆ ವಿಷಯಗಳ ಮೇಲೆ ಪ್ರೀತಿಯೇನೂ ಹೋಗಿರುವದಿಲ್ಲ.

**ಕೃ.**—ನಿಜ. ಮೂರ್ಖನಾದರೂ ಬಲಾತ್ಕಾರದಿಂದ ಇಂದ್ರಿಯಗಳನ್ನು ಮುದುರಿಕೊಳ್ಳುವದಕ್ಕಾಗುತ್ತದೆ. ಆದರೆ ವಿಷಯಗಳ ಮೇಲಿನ ಪ್ರೀತಿಯನ್ನು ಬಿಡುವದಕ್ಕೆ ಅವನಿಗೆ ಆಗುವದಿಲ್ಲ. ಬ್ರಹ್ಮವನ್ನರಿತವರಿಗೆ ವಿಷಯಗಳ ಮೇಲೆ ಪ್ರೀತಿ ಇರುವದಿಲ್ಲ.

**ಅ.**—ಬ್ರಹ್ಮವನ್ನರಿಯಬೇಕೆಂಬುವನು ಮೊದಲೇನು ಮಾಡಬೇಕು?

**ಕೃ.**—ಅವನು ಮೊದಲು ಇಂದ್ರಿಯಗಳನ್ನು ಬಿಗಿಹಿಡಿಯಬೇಕು. ಇಲ್ಲದಿದ್ದರೆ ಅವು ಎಂಥ ಬುದ್ಧಿವಂತನ ಮನಸ್ಸನ್ನಾದರೂ ಅವನ ಕಣ್ಣೆದುರಿಗೇ ಬಲಾತ್ಕಾರದಿಂದ ವಿಷಯಗಳ ಕಡೆಗೆ ಸೆಳೆದುಕೊಂಡು ಹೋಗಿ ಮನುಷ್ಯನನ್ನು ವ್ಯಥೆಗೊಳಿಸುವವು. ಆದ್ದರಿಂದ ಅವುಗಳನ್ನು ಬಿಗಿಹಿಡಿದು ತಾನು ಸರ್ವಾಂತರ್ಯಾಮಿಯಾದ ಬ್ರಹ್ಮವೇ ಹೊರತು ಬೇರೆ ಅಲ್ಲವೆಂಬ

ಭಾವನೆಯಲ್ಲಿ ಮನಸ್ಸನ್ನು ನಿಲ್ಲಿಸಬೇಕು. ಅದನ್ನು ಬಿಟ್ಟು ವಿಷಯಗಳ ಆಲೋಚನೆಯನ್ನು ಒಳಕ್ಕೆ ಸೇರಿಸಿಕೊಂಡರೆ ವಿಷಯಗಳಲ್ಲಿಯೇ ಪ್ರೀತಿಯುಂಟಾಗಿ ಅದರಿಂದ ಬಯಕೆ, ಸಿಟ್ಟು – ಮೊದಲಾದವುಗಳೆದ್ದು ಅವನನ್ನು ಹಾಳುಮಾಡಿಬಿಡುವವು.

**ಅ.**—ಇಂದ್ರಿಯಗಳನ್ನು ಬಿಗಿಹಿಡಿದೇ ಇದ್ದರೆ ವ್ಯವಹಾರವು ಸಾಗುವದು ಹೇಗೆ ?

**ಕೃ.**—ಮೋಕ್ಷವನ್ನು ಬಯಸುವವನಿಗಾದರೂ ಅಷ್ಟಿಷ್ಟು ವ್ಯವಹಾರವಿದ್ದೇ ಇರುವದು ನಿಜ. ಸಾಮಾನ್ಯರ ಇಂದ್ರಿಯಗಳು ವಿಷಯಗಳ ಕಡೆಗೆ ಹೊರಡುವಾಗ ಒಂದು ಬೇಕೆಂದೋ ಅಥವಾ ಒಂದು ಬೇಡವೆಂದೋ ಉದ್ದೇಶಿಸಿರುವವು. ಮೋಕ್ಷವನ್ನು ಬಯಸುವವನು ಆ ಬೇಕು ಬೇಡೆಂಬ ಉದ್ದೇಶಗಳಿಂದ ವ್ಯವಹರಿಸುವವನಾಗಬಾರದು. ಅವನು ತನ್ನ ವಿವೇಕಬುದ್ಧಿಗೆ ಅಡಿಯಾಳಾಗಿ ತನ್ನ ಇಂದ್ರಿಯಗಳನ್ನು ಮಾಡಬಾರದವುಗಳಲ್ಲದ ವ್ಯವಹಾರದಲ್ಲಿ ತೊಡಗಿಸಬಹುದು. ಹೀಗೆ ವ್ಯವಹರಿಸಿದರೂ ಅವನ ಮನಸ್ಸಿನ ಪ್ರಸನ್ನತೆಗೇನೂ ಹಾನಿ ಇಲ್ಲ.

**ಅ.**—ಆ ಪ್ರಸನ್ನತೆಯಿಂದೇನಾಗುವದು ?

**ಕೃ.**—ಮನಸ್ಸು ಪ್ರಸನ್ನವಾಗಿದ್ದರೆ ಅಲ್ಲಿ ಯಾವ ದುಃಖವೂ ತಲೆಹಾಕಲಾರದು. ಪ್ರಸನ್ನವಾದ ಮನಸ್ಸು ಆತ್ಮಸ್ವರೂಪದಲ್ಲಿ ಕದಲದೆ ನಿಲ್ಲುತ್ತದೆ. ಇಂದ್ರಿಯಗಳನ್ನು ಬಿಗಿಹಿಡಿದವರು ಮಾತ್ರ ಇದನ್ನು ಸಾಧಿಸಬಲ್ಲರು.

**ಅ.**—ಇಂದ್ರಿಯಗಳನ್ನು ಬಿಗಿಹಿಡಿಯದಿದ್ದರೇನಾಗುತ್ತದೆ ?

**ಕೃ.**—ಇಂದ್ರಿಯಗಳನ್ನು ಅವುಗಳ ಇಷ್ಟದಂತೆ ಹರಿಯಬಿಟ್ಟರೆ ಅವು-ಗಾಳಿಯು ಹಡಗನ್ನು ಸಮುದ್ರದಲ್ಲಿ ಹಾರಿಸಿಕೊಂಡು ಹೋಗುವಂತೆ-ಅವನ ಬುದ್ಧಿಯನ್ನು ಹಾರಿಸಿಕೊಂಡು ಹೋಗುವವು. ಆದ್ದರಿಂದ ಬುದ್ಧಿಯನ್ನು ಕದಲದಂತೆ ಇಟ್ಟುಕೊಳ್ಳಬೇಕೆನ್ನುವವರು ಇಂದ್ರಿಯಗಳನ್ನು ಬಿಗಿಹಿಡಿಯಬೇಕು.

**ಅ.**—ಇಂದ್ರಿಯಗಳನ್ನು ಮುದುರಿಕೊಳ್ಳುವದರ ವಿಷಯವಾ

ನಡುವೆ ಬಂದ ಈ ಮಾತು ಇರಲಿ. ಜ್ಞಾನಿಯು ಹೇಗಿರುವನೆಂಬ ವಿಷಯವು ಮುಂದೆ ಸಾಗಲಿ.

**ಕೃ.**--ಅದನ್ನು ಬೇರ್ಪಾಗಿ ಹೇಳುವದೇನು ? ಪ್ರಾಪಂಚಿಕರು ಯಾವ ವಿಷಯವನ್ನು ಮನಸ್ಸಿಗೆ ಎಷ್ಟು ಮಾತ್ರವೂ ಹಚ್ಚಿಕೊಳ್ಳದೆ ಕಣ್ಣುಮುಚ್ಚಿಕೊಂಡಿರುವವರಾಗಿರುವರೊ ಅಂಥ ಬ್ರಹ್ಮವಿಚಾರವನ್ನು ಜ್ಞಾನಿಯು ತನ್ನ ಕಣ್ಣಲ್ಲಿ ತುಂಬಿಕೊಂಡಿರುವವನಾಗಿರುವನು. ಪ್ರಾಪಂಚಿಕರು ಯಾವ ವಿಷಯದಲ್ಲಿ ತನ್ಮಯರಾಗಿ ಅದನ್ನೆ ಕಣ್ತುಂಬ ತುಂಬಿಕೊಂಡವರಾಗಿರುವರೊ ಅಂಥ ವ್ಯವಹಾರವಿಷಯದಲ್ಲಿ ಜ್ಞಾನಿಯು ಅದನ್ನು ಮನಸ್ಸಿಗೆ ಎಷ್ಟು ಮಾತ್ರವೂ ಹಚ್ಚಿಕೊಳ್ಳದೆ ಕಣ್ಣುಮುಚ್ಚಿಕೊಂಡಿರುವವನಾಗಿರುವನು. ಎಷ್ಟು ಕಡೆಯಿಂದ ನೀರು ಬಂದು ತುಂಬಿದರೂ ಸಮುದ್ರದಲ್ಲಿ ವಿಕೃತಗಳು ಕಾಣಬರದೆ ಬಂದ ನೀರೆಲ್ಲ ಅಲ್ಲಲ್ಲಿಯೇ ಅಡಗುವಂತೆ ಎಷ್ಟು ಬಯಕೆಗಳು ಬಂದು ಸೇರಿದರೂ ಯಾರಲ್ಲಿ ವಿಕೃತಗಳು ಕಾಣಬರದೆ ಬಂದ ಬಯಕೆಗಳೆಲ್ಲ ಅಲ್ಲಲ್ಲಿಯೇ ಅಡಗುವವೊ ಅವನೊಬ್ಬನಿಗೇ ಮೋಕ್ಷವೇ ಹೊರತು ಬಯಕೆಗಳಿಂದ ಬೆಂದು ಬೆಂಡಾಗುವವನಿಗೆ ಅದರ ಆಸೆ ಇಲ್ಲ. ತನ್ನಿಂದ ಬಯಕೆಗಳ ಬೇರುಗಳನ್ನೆಲ್ಲ ಕತ್ತರಿಸಿ ಬದುಕಿರುವಷ್ಟರ ಮಟ್ಟಿಗೆ ವ್ಯವಹಾರವಾಡುತ್ತ ಅದರಲ್ಲಿಯೂ ಕೂಡ ನಾನುನನ್ನದೆಂಬ ಅಭಿಮಾನ ವಿಲ್ಲದವನಾಗಿ ತನ್ನಲ್ಲೇನಾದರೂ ಹೆಚ್ಚಿನ ಯೋಗ್ಯತೆ ಇದ್ದರೆ ಅದಕ್ಕೆ ಹೆಮ್ಮೆಗೊಳ್ಳದೆ ಇರುವವನು ಸಾಕ್ಷಾದ್ಬ್ರಹ್ಮನೇ ಆಗುತ್ತಾನೆ. ಈ ಸ್ಥಿತಿ ಸಾಯುವಾಗ ಬಂದರೂ ಕೂಡ ಅವನಿಗೆ ಆಗಲೇ ಮೋಕ್ಷ. ಇನ್ನು ಚಿಕ್ಕಂದಿನಿಂದ ವಿರಕ್ತರಾಗಿ ಯಾವಾಗಲೂ ಬ್ರಹ್ಮವಿಚಾರದಲ್ಲಿಯೇ ಮುಳುಗಿರುವವರಿಗೆ ಹೇಳಬೇಕಾದ್ದೇನು !

**ಅ.**--ನೀನು ಜ್ಞಾನದ ಹೆಚ್ಚುಗಾರಿಕೆಯನ್ನೂ ಕಣ್ಣಮುಂದಿಡುತ್ತಿ ಮತ್ತು ಕರ್ಮವನ್ನು ಮಾಡೆಂದೂ ಹೇಳುತ್ತಿ. ಜ್ಞಾನವು ಕರ್ಮಕ್ಕಿಂತ ಹೆಚ್ಚಿನದಾದರೆ ಹಿಂಸಾರೂಪವಾದ ಕರ್ಮಕ್ಕೇಕೆ ನನ್ನನ್ನು ತಳ್ಳುತ್ತಿ ?

## — ಕರ್ಮಯೋಗದ ಅಗತ್ಯ —

**ಕೃ.**— ಈ ಬ್ರಹ್ಮಾಂಡದಲ್ಲಿ ನಾನು ಮೊದಲು ಪ್ರಜೆಗಳನ್ನು ಸೃಷ್ಟಿಸಿ

ಹಾಗೆ ಎರಡು ಸಂಪ್ರದಾಯಗಳನ್ನು ಹೇಳಿದೆನು. ಒಂದೇನೆಂದರೆ ಪ್ರಾಪಂಚಿಕವಾದ ಆಸೆಗಳನ್ನೆಲ್ಲ ತೊರೆದು ಕರ್ಮದ ಸಂಬಂಧವಿಲ್ಲದಂತೆ ವೇದಾಂತದ ತಿಳಿವಳಿಕೆಯನ್ನು ಅಳವಡಿಸಿಕೊಂಡಿರುವವರ ಜ್ಞಾನನಿಷ್ಠೆ. ಇನ್ನೊಂದೇನೆಂದರೆ ಕರ್ಮದಲ್ಲಿಯೇ ಮುಂದುವರಿಯುವ ಕರ್ಮನಿಷ್ಠೆ. ಹೀಗಿದ್ದರೂ ನೀನು ಕರ್ಮವನ್ನು ಮಾಡುವದಿಲ್ಲವೆಂದು ಕೈಮುದುರಿಕೊಂಡು ಕುಳಿತ ಮಾತ್ರಕ್ಕೇ ಕರ್ಮದ ಸಂಬಂಧವಿಲ್ಲದವನಾಗುವದೂ ಇಲ್ಲ; ಮತ್ತು ಸನ್ಯಾಸಿ ಹಾಗೆ ಕರ್ಮವನ್ನು ತೊರೆದ ಮಾತ್ರದಿಂದ ಜ್ಞಾನನಿಷ್ಠೆಯನ್ನು ಪಡೆಯುವದೂ ಇಲ್ಲ. ಜ್ಞಾನನಿಷ್ಠೆಯನ್ನು ಪಡೆಯಲಿಚ್ಛಿಸುವವನು ಫಲಾಪೇಕ್ಷೆ ಇಲ್ಲದೆ ತನ್ನ ಸ್ವಧರ್ಮವನ್ನು ಚೆನ್ನಾಗಿ ಆಚರಿಸುವದರ ಮೂಲಕ ತನ್ನ ಪಾಪಗಳನ್ನೆಲ್ಲ ಕಳೆದುಕೊಂಡು ಚಿತ್ತಶುದ್ಧಿಯನ್ನು ಮಾಡಿಕೊಳ್ಳಬೇಕು. ಆಗ ಅವನು ಜ್ಞಾನನಿಷ್ಠೆಯನ್ನು ಪಡೆಯುವದಕ್ಕೆ ತಕ್ಕವನಾಗುವನು.

**ಅ.**—ಕರ್ಮವನ್ನು ತೊರೆದ ಮಾತ್ರದಿಂದ ಜ್ಞಾನವನ್ನು ಪಡೆದಂತಾಗುವದಿಲ್ಲವೆಂಬ ಮಾತು ಸರಿಯೆ. ಜ್ಞಾನವಿಲ್ಲದೆ ಕೈಮುದುರಿಕೊಂಡು ಕೂತರೂ ಕರ್ಮದ ಸಂಬಂಧವಿಲ್ಲದವನಾಗುವದಿಲ್ಲವೆಂಬುದು ಹೇಗೆ ?

**ಕೃ.**—ಯಾವನೂ ಒಂದು ರೆಪ್ಪೆ ಹೊಡೆಯುವಷ್ಟು ಹೊತ್ತಾದರೂ ಎಂದಿಗೂ ಯಾವ ಕೆಲಸವನ್ನೂ ಮಾಡದೆ ಇರುವದಕ್ಕೆ ಆಗುವದಿಲ್ಲ. ತನಗರಿವಿಲ್ಲದಂತೆ ತನ್ನ ಹುಟ್ಟುಗುಣದಂತೆ ಏನನ್ನಾದರೂ ಮಾಡುತ್ತಲೆ ಇರುತ್ತಾನೆ.

**ಅ.**—ಜ್ಞಾನಿಯೂ ತನ್ನ ಹುಟ್ಟುಗುಣದಂತೆ ಏನನ್ನಾದರೂ ಮಾಡುತ್ತಲೆ ಇರುತ್ತಾನಲ್ಲ !

**ಕೃ.**—ಅವನೂ ತನ್ನ ಹುಟ್ಟುಗುಣದಂತೆ ಏನನ್ನಾದರೂ ಮಾಡಿದರೂ ಅವನು ತನ್ನ ಜ್ಞಾನದ ಬಲದಿಂದ ಗುಣಗಳನ್ನು ದಾಟಿದವನಾಗಿ ಕರ್ಮದ ಸಂಬಂಧದಿಂದ ಬಿಡುಗಡೆಯನ್ನು ಹೊಂದಿರುತ್ತಾನೆ. ಅವನ ಮಾತು ಬೇರೆ.

**ಅ.**—ಇರಲಿ. ಅಜ್ಞಾನಿಯು ಕರ್ಮವನ್ನು ತೊರೆದಿರುವದಾಗುವದೇ ಇಲ್ಲವೆಂಬುದು ಹೇಗೆ ?

**ಕೃ.**—ಅವನು ಕೈಕಾಲುಗಳನ್ನು ಮುದುರಿಕೊಂಡಿದ್ದರೂ ಮನ

ಸ್ಸಿನಲ್ಲಿಯೇ ವಿಷಯಸುಖಗಳನ್ನು ಕನವರಿಸಿಕೊಳ್ಳುತ್ತಿರುತ್ತಾನೆ. ಆ ಕಳ್ಳಬಾಳಿಗಿಂತ ಮನಸ್ಸಿನಿಂದ ಇಂದ್ರಿಯಗಳನ್ನು ಬಿಗಿಹಿಡಿದು ಫಲದ ಬಯಕೆ ಇಲ್ಲದೆ ಕರ್ಮವನ್ನು ಮಾಡುತ್ತಿರುವುದು ಮೇಲು. ಆದ್ದರಿಂದ ಫಲಕ್ಕಾಗಿ ಮಾಡುವ ಕರ್ಮಗಳನ್ನು ಬಿಟ್ಟು ನಿತ್ಯವೂ ಯಾವ ಕರ್ಮಗಳನ್ನು ಮಾಡಿಯೇ ತೀರಬೇಕೆಂದು ಶಾಸ್ತ್ರವು ಹೇಳಿದೆಯೊ ಅಂಥವುಗಳನ್ನು ನೀನು ಮಾಡು. ನೀನು ಏನೂ ಮಾಡುವುದಿಲ್ಲವೆಂದು ಕುಳಿತರೆ ನಿನ್ನ ಶರೀರದ ವ್ಯವಹಾರವೇ ನಡೆಯದೆ ಹೋದೀತು.

**ಅ.**—ಕರ್ಮಗಳೆಂಬುವೆಲ್ಲ ನಮ್ಮನ್ನೆಂದು ಕಟ್ಟಿಗೊಳಪಡಿಸುವವುಗಳೆಂಬ ಕಲ್ಪನೆಯು ನನ್ನನ್ನು ಹಿಂದಕ್ಕೆಳೆಯುತ್ತಿದೆಯಲ್ಲ !

**ಕೃ.**—ಆ ಕಲ್ಪನೆಯು ಈಶ್ವರನ ಪ್ರೀತಿಗಾಗಿ ಮಾಡುವ ಕರ್ಮಗಳ ವಿಷಯಕ್ಕೆ ಸಲ್ಲುವದಿಲ್ಲ. ಉಳಿದ ಕರ್ಮಗಳಿಗೆ ನೀನು ಹೇಳಿದ್ದು ಸರಿ. ಆದ್ದರಿಂದ ಫಲದ ಬಯಕೆ ಇಲ್ಲದೆ ಈಶ್ವರಪ್ರೀತ್ಯರ್ಥವಾಗಿ ಮಾಡು. ಬ್ರಹ್ಮನು ಪ್ರಜೆಗಳನ್ನು ಹುಟ್ಟಿಸಿದಾಗಲೇ ಈಶ್ವರಪ್ರೀತ್ಯರ್ಥವಾದ ಕರ್ಮಗಳನ್ನು ಹುಟ್ಟಿಸಿ ಅವುಗಳಿಂದ ಏಳಿಗೆಯನ್ನು ಹೊಂದಿರೆಂದು ಹೇಳಿದ್ದಾನೆ.

**ಅ.**—ಕರ್ಮದಿಂದ ಏಳಿಗೆಯಾಗುವದು ಹೇಗೆ ?

**ಕೃ.**—ದೇವತೆಗಳ ಪ್ರೀತಿಗಾಗಿ ಕರ್ಮಗಳನ್ನು ಮಾಡಬೇಕು. ಅದರಿಂದ ತೃಪ್ತರಾದ ದೇವತೆಗಳು ಮಳೆ ಮೊದಲಾದವುಗಳನ್ನು ಕೊಡಬೇಕು. ಹೀಗೆ ಒಬ್ಬರಿಗೊಬ್ಬರು ನೆರವಾಗಿ ಬಾಳುತ್ತ ಸ್ವರ್ಗವನ್ನೊ ಮೋಕ್ಷವನ್ನೊ ಪಡೆಯಬಹುದು. ನಮ್ಮ ಪೂಜೆಗೆ ಮೆಚ್ಚಿದ ದೇವತೆಗಳು ನಮಗೆ ಬೇಕು ಬೇಕಾದ ಭೋಗಸಾಧನಗಳನ್ನೆಲ್ಲ ಕೊಡುವರು. ಆದ್ದರಿಂದ ಅವುಗಳನ್ನೆಲ್ಲ ನಾವು ತಿರುಗಿ ಅವರಿಗೇ ನಿವೇದನಮಾಡದೆ ನಮ್ಮ ಬಚ್ಚುಬೆಳೆಸಿಕೊಂಡರೆ ನಮ್ಮದು ಕಳ್ಳತನವಾಗುವದು. ನಾವು ಅವರ ಪ್ರಸಾದವೆಂದುಂಡರೆ ಅದು ನಮ್ಮ ಪಾಪವನ್ನು ಕಳೆಯುವದು. ತನಗೆಂದು ಮಾಡಿದ ಅಡಿಗೆಯು ಪಾಪಕ್ಕೆ ಕಾರಣ. ಹೀಗೆ ಕರ್ಮವು ತನ್ನ ಏಳಿಗೆಗೆ ಮಾತ್ರವೇ ಇಲ್ಲ; ಜಗತ್ತೆಂಬ ಚಕ್ರದ ತಿರುಗುವಿಕೆಗೂ ಕಾರಣ.

**ಅ.**—ಜಗಚ್ಚಕ್ರದ ತಿರುಗುವಿಕೆಗೆ ಅದು ಹೇಗೆ ಕಾರಣ ?

**ಕೃ.**—ಹೇಗೆಂದರೆ ಉಂಡ ಅನ್ನದಿಂದ ರಕ್ತ ಮೊದಲಾದವುಗಳಾಗಿ

ಆದರ ಬಲದಿಂದ ಪ್ರಾಣಿಗಳು ಹುಟ್ಟುತ್ತಿರುವದಂತು ನಮಗೆ ಕಣ್ಣಿಗೆ ಕಟ್ಟಿದಂತೆ ಕಾಣುತ್ತಲೆ ಇದೆಯಷ್ಟೆ. ಆ ಅನ್ನಕ್ಕೆ ಮಳೆ ಕಾರಣ. ಮಳೆಗೆ ಈಶ್ವರಪ್ರೀತ್ಯರ್ಥವಾದ ಕರ್ಮವು ಕಾರಣ. ಈಶ್ವರನಿಗೆ ಪ್ರೀತಿಯಾಗಲೆಂದು ಅಗ್ನಿಯಲ್ಲಿ ಆಹುತಿಯನ್ನು ಹಾಕಿದರೆ ಅದು ಹೋಗಿ ಸೂರ್ಯನಿಗೆ ಮುಟ್ಟಿ ಸೂರ್ಯನಿಂದ ಮಳೆಯೂ ಮಳೆಯಿಂದ ಕಾಳುಕಡ್ಡಿಗಳೂ ಕಾಳುಕಡ್ಡಿಗಳನ್ನು ತಿನ್ನುವದರಿಂದ ಪ್ರಾಣಿಗಳ ವೃದ್ಧಿಯೂ ಆಗುವದು.

**ಅ.**—ಈ ಕರ್ಮಗಳು ಎಲ್ಲಿಂದ ಹುಟ್ಟಿದವು?

**ಕೃ.**—ಪರಬ್ರಹ್ಮನಿಂದ ನಿಶ್ವಾಸದಂತೆ ಹೊರಬಿದ್ದ ವೇದಗಳು ಈ ಕರ್ಮಗಳನ್ನು ಪ್ರಕಟಿಸಿರುವವು. ವೇದದಲ್ಲಿ ಹೇಳದೆ ಇರುವ ವಿಷಯಗಳೇ ಇಲ್ಲವಾದರೂ ಅದರೊಳಗೆಲ್ಲ ಕರ್ಮವೇ ಮುಖ್ಯ. ಆದ್ದರಿಂದ ಆ ಈಶ್ವರಾಜ್ಞೆಯನ್ನು ಯಾವನು ನಡೆಸುವದಿಲ್ಲವೊ ಅವನ ಬಾಳು ವ್ಯರ್ಥ.

**ಅ.**—ಈ ಕರ್ಮವನ್ನು ಮನುಷ್ಯರಾಗಿರುವವರೆಲ್ಲರೂ ಮಾಡಬೇಕಷ್ಟೆ?

**ಕೃ.**—ಎಲ್ಲರೂ ಮಾಡಬೇಕು. ಆದರೆ ಯಾರು ವಿಷಯಗಳ ಕಡೆಗೆ ಹರಿಯದೆ ತಮ್ಮೊಳಗಣ ಆತ್ಮಸ್ವರೂಪದಲ್ಲಿಯೇ ತಮ್ಮ ಪ್ರೀತಿಯನ್ನೆಲ್ಲ ಇಟ್ಟು ಅದರಿಂದಲೆ ತೃಪ್ತರಾಗಿ ಜ್ಞಾನನಿಷ್ಠೆಯ ಮೆಟ್ಟಿಲನ್ನು ಹತ್ತಿರುವರೊ ಅವರು ಮಾಡಬೇಕಾದ್ದಿಲ್ಲ. ಏಕೆಂದರೆ ಅವರಿಗೆ ಕರ್ಮವನ್ನು ಮಾಡುವದರಿಂದ ಏನೂ ಬರಬೇಕಾದದ್ದೂ ಇಲ್ಲ; ಬಿಡುವದರಿಂದ ಏನೂ ಹೋಗಬೇಕಾದದ್ದೂ ಇಲ್ಲ. ಅರ್ಜುನ, ನೀನಿನ್ನೂ ಈ ಮೆಟ್ಟಲಿಗೆ ಬಂದಿಲ್ಲವಪ್ಪ. ಆದ್ದರಿಂದ ನೀನು ನಿನ್ನ ನಿತ್ಯಕರ್ಮವನ್ನು ತಪ್ಪದೆ ಮಾಡು. ಫಲವನ್ನು ಬಯಸದೆ ಕರ್ಮವನ್ನು ಮಾಡಿದವರು ಚಿತ್ತಶುದ್ಧಿಯನ್ನು ಪಡೆದು ಆಮೇಲೆ ಆ ಮೆಟ್ಟಿಲಿಗೆ ಏರುವರು. ಹಿಂದೆ ಪ್ರಸಿದ್ಧರಾದ ಜನಕ, ಅಶ್ವಪತಿ– ಮೊದಲಾದವರು ಕೂಡ ಕರ್ಮದಿಂದಲೆ ಸಿದ್ಧಿಯನ್ನು ಹೊಂದಿದ್ದಾರೆ. ಅವರನ್ನು ನೀನು ಜ್ಞಾನಿಗಳೆಂದು ತಿಳಿಯುವದಾದರೆ ಇತರರಿಗೆ ಮೇಲುಪಙ್ಕ್ತಿಯಾಗಿ ಕರ್ಮವನ್ನು ಮಾಡುತ್ತಿದ್ದು ಮೋಕ್ಷವನ್ನು ಹೊಂದಿದರೆಂದು ತಿಳಿ. ಅವರು ಜ್ಞಾನಿಗಳಲ್ಲವೆಂದು ನಿನ್ನ ಅಭಿಪ್ರಾಯವಿದ್ದರೆ ಅವರು ಕರ್ಮದಿಂದ ಚಿತ್ತಶುದ್ಧಿಯನ್ನು ಪಡೆದುಕೊಂಡು ಜ್ಞಾನಿಗಳಾದರೆಂದು ತಿಳಿ.

ಅ.—ಇತರರಿಗೆ ಮೇಲುಪಙ್ಕ್ತಿಯಾಗಿ ಆದರೂ ಮಾಡಬೇಕೆಂಬುದೇಕೆ?

ಕೃ.—ಲೋಕದಲ್ಲಿ ದೊಡ್ಡವರೆನಿಸಿಕೊಂಡವರನ್ನು ಉಳಿದವರು ಹಿಂಬಾಲಿಸುತ್ತಾರೆ. ದೊಡ್ಡವರು ಮಾಡಿದ್ದೆ ಉಳಿದವರಿಗೆ ಪ್ರಮಾಣ. ನಾನು ಮಾಡುತ್ತಿರುವ ಕರ್ಮಕ್ಕೂ ಅದೇ ಕಾರಣ. ಹಾಗಿಲ್ಲದಿದ್ದರೆ ನಾನಿನ್ನೇನನ್ನು ಹೊಸದಾಗಿ ಪಡೆಯಬೇಕಾಗಿದೆ? ನಾನು ಎಡೆಬಿಡದೆ ಕರ್ಮವನ್ನು ಮಾಡುತ್ತಿರದೆ ಹೋದರೆ ಜನರೆಲ್ಲರೂ ನನ್ನಂತೆಯೇ ಮಾಡಿಬಿಡುತ್ತಾರೆ. ಹೀಗೆ ಕರ್ಮದ ಹೆಸರೇ ಅಳಿದುಹೋದರೆ ಜಗತ್ತೇ ನಾಶವಾದೀತು. ಜನರೆಲ್ಲರೂ ಕುಲಗೆಟ್ಟು ಹಾಳಾದಾರು. ಎಲ್ಲರಿಗೂ ಒಳ್ಳೆಯದನ್ನು ಮಾಡಬೇಕೆಂಬ ನಾನು ಕೆಟ್ಟದ್ದನ್ನು ಮಾಡಿದವನಾದೇನು. ಆದ್ದರಿಂದ ನನ್ನಂತೆ ನೀನು ಜ್ಞಾನಿಯಾದರೂ ಮಾಡಬೇಕು; ಅಜ್ಞಾನಿಯಾದವರಂತು ಮಾಡಲೇಬೇಕು. ಜ್ಞಾನಿಯಾದರೂ-ಅಜ್ಞಾನಿಯು ಫಲಾಪೇಕ್ಷೆಯಿಂದ ಮಾಡುವಂತೆಯೇ-ಮಾಡಬೇಕು. ಆದರೆ ಫಲಾಪೇಕ್ಷೆ ಇರಬಾರದು. ಕರ್ಮವನ್ನು ಮಾಡಿ ಫಲವನ್ನುಣ್ಣಬೇಕೆಂಬ ಉದ್ದೇಶದಿಂದ ಅದಕ್ಕೆ ಬಲವಾಗಿ ಗಂಟುಬಿದ್ದಿರುವವರಿಗೆ ಕರ್ಮದಲ್ಲಿ ಅನಾದರವು ಹುಟ್ಟುವದಕ್ಕೆ ದಾರಿಯನ್ನು ಕೊಡಬಾರದು.

ಅ.—ಅಜ್ಞಾನಿಗಳು ಕರ್ಮಕ್ಕೆ ಹೇಗೆ ಬಲವಾಗಿ ಗಂಟುಬಿದ್ದಿರುವರು?

ಕೃ.—ಅದರ ಗುಟ್ಟೇನೆಂದರೆ- ಈಶ್ವರನ ಶಕ್ತಿಗೆ ಮಾಯೆಯೆಂದು ಹೆಸರು. ಆ ಮಾಯೆಯಲ್ಲಿ ಸತ್ತ್ವ, ರಜ, ತಮ-- ಎಂಬ ಮೂರು ಗುಣಗಳಿರುವವು. ಆ ಗುಣಗಳಿಂದಲೆ ಈ ದೇಹವೂ ಇಂದ್ರಿಯಗಳೂ ಆಗಿರುವವು. ಕರ್ಮಗಳೆಂಬುವೆಲ್ಲ ಈ ದೇಹೇಂದ್ರಿಯಾದಿಗಳಿಂದಲೆ ನಡೆಯುವವು. ಮನುಷ್ಯನ ನಿಜಸ್ವರೂಪವು ಈ ದೇಹೇಂದ್ರಿಯಗಳಲ್ಲ; ಅವುಗಳೊಳಗಿರುವ ಚೈತನ್ಯ. ಆ ಚೈತನ್ಯವು ಏನನ್ನೂ ಮಾಡುವದೂ ಇಲ್ಲ; ಉಣ್ಣುವದೂ ಇಲ್ಲ. ದೇಹೇಂದ್ರಿಯಗಳು ಮಾಡುವದಕ್ಕೂ ಉಣ್ಣುವದಕ್ಕೂ ಅದು ಸಾಕ್ಷಿ. ಹೀಗಿದ್ದರೂ ಮನುಷ್ಯನು ತಾನು ಚೈತನ್ಯಸ್ವರೂಪನೆಂಬುದನ್ನು ಮರೆತು ಈ ದೇಹೇಂದ್ರಿಯಗಳನ್ನೆ ತಾನೆಂಬ ತಪ್ಪುತಿಳಿವಳಿಕೆಯನ್ನು ಹೊಂದಿ ತಾನು ಮಾಡುತ್ತೇನೆಂಬ ಕರ್ತೃತ್ವವನ್ನು ತನ್ನ ಮೈಮೇಲೆ ಹಾಕಿಕೊಳ್ಳುತ್ತಾನೆ. ಇದೇ ಅವನ ಕಗ್ಗಂಟು.

**ಅ.**—ಜ್ಞಾನಿಗಳ ತಿಳಿವಳಿಕೆ ಹೇಗಿರುವದು ?

**ಕೃ.**—ಅವರಿಗೆ ಮಾಯೆಯು ಗುಟ್ಟು ಗೊತ್ತು. ದೇಹೇಂದ್ರಿಯಾದಿಗಳೂ ಗುಣಗಳಿಂದಾದವುಗಳಾಗಿಯೂ ಹೊರಗಣ ವಿಷಯಗಳೂ ಗುಣಗಳಿಂದಾದವುಗಳಾಗಿಯೂ ಇರುವದರಿಂದ ದೇಹೇಂದ್ರಿಯ ಮೊದಲಾದ ರೂಪದಲ್ಲಿರುವ ಗುಣಗಳು ಹೊರಗೆ ವಿಷಯಗಳ ರೂಪದಲ್ಲಿರುವ ಗುಣಗಳೊಡನೆ ವ್ಯವಹರಿಸುವವೆಂದು ಅವರು ತಿಳಿಯುತ್ತಾರೆ. ತಾವು ಅವುಗಳಿಗೆಲ್ಲ ಸಾಕ್ಷಿಯಾದ ಚೈತನ್ಯವೆಂಬ ಅರಿವು, ಅವರಿಗಿರುವದರಿಂದ ಅವರಿಗೆ ಕರ್ಮದ ಗಂಟಿಲ್ಲ.

**ಅ.**—ಹಾಗಾದರೆ ಜ್ಞಾನವನ್ನು ಪಡೆಯಲಿಚ್ಛಿಸುವವನು ತನ್ನ ಕರ್ಮವನ್ನು ಹೇಗೆ ಮಾಡಬೇಕು ?

**ಕೃ.**—ಅವನು ತಾನು ಈಶ್ವರನಿಗೆ ದಾಸನಾಗಿ ಅವನ ಪ್ರೀತಿಗಾಗಿ ಮಾಡುವವನೆಂಬ ತಿಳಿವಳಿಕೆಯನ್ನು ತಂದುಕೊಂಡು ಮಾಡಬೇಕು. ಫಲದ ಮೇಲೆ ಆಸಕ್ತಿಯೂ ನಾನು ನನ್ನದೆಂಬ ಅಭಿಮಾನವೂ ಇರಬಾರದು. ಅರ್ಜುನ, ನೀನು ಹೀಗೆ ತಿಳಿದು ಮನಸ್ಸಿನ ತಳಮಳವನ್ನು ಬಿಟ್ಟು ಕಾದು. ಯಾವಾಗಲೂ ಈ ನನ್ನ ಉಪದೇಶದಂತೆ ನಡೆಯುವವನಿಗೂ ಕರ್ಮಗಳ ತೊಡಕು ಬೀಳುವದಿಲ್ಲ. ಹಾಗೆ ನಡೆಯದೆ ಅದನ್ನು ಜರಿಯುವವರು ಯಾವ ಸರಿಯಾದ ತಿಳಿವಳಿಕೆಯೂ ಇಲ್ಲದವರಾಗಿ ಅವಿವೇಕಿಗಳಾಗಿ ಹಾಳಾಗುವರು.

**ಅ.**—ನೀನು ಹೇಳಿದಂತೆ ನಡೆಯದೆ ತಮ್ಮ ತಮ್ಮ ಕರ್ಮಗಳನ್ನು ಬಿಡುವವರು ನಿನ್ನ ಆಜ್ಞೆಯನ್ನು ಮೀರಿದ್ದಕ್ಕೆ ಶಿಕ್ಷೆಯಾದೀತೆಂದೇಕೆ ಹೆದರುವದಿಲ್ಲ ?

**ಕೃ.**—ಎಷ್ಟು ತಿಳಿದವರಿಗಾದರೂ ತಮ್ಮ ಹುಟ್ಟುಗುಣದಂತೆ ನಡೆಯುವದು ತಪ್ಪಿದ್ದಲ್ಲ. ಹುಟ್ಟುಗುಣವೆಂದರೆ ಹಿಂದಿನ ಜನ್ಮದಲ್ಲಿ ಮಾಡಿದ ಪಾಪಪುಣ್ಯಗಳ ಸಂಸ್ಕಾರರೂಪವಾಗಿ ಈ ಜನ್ಮದಲ್ಲಿ ಹುಟ್ಟುವಾಗಲೆ ಕಾಣಿಸಿಕೊಂಡಿರುವ ಸ್ವಭಾವ. ಎಲ್ಲರೂ ಆ ಹುಟ್ಟುಗುಣದ ಸೆಳೆತಕ್ಕೆ ಸಿಕ್ಕಿ ಹೋಗುತ್ತಿರುತ್ತಾರೆ. ಹಾಗೆ ಮಾಡಬೇಡಿರೆಂದು ನಾನು ಹೇಳಿದರೂ ಮತ್ತೆ ನೂರು ಹೇಳಿದರೂ ನಡೆಯುವದಿಲ್ಲ.

**ಅ.**—ಎಲ್ಲರೂ ಹುಟ್ಟುಗುಣಕ್ಕೆ ಸಿಕ್ಕಿಬಿದ್ದಿರುವವರಾದರೆ ಹುಟ್ಟು

ಗುಣವಿಲ್ಲದವರೇ ಇಲ್ಲವಾದ್ದರಿಂದ ಪುರುಷಪ್ರಯತ್ನಕ್ಕೆ ಪ್ರಾಶಸ್ತ್ಯವಿಲ್ಲದೆ ಹೋಗಿ ಶಾಸ್ತ್ರಗಳೆಲ್ಲ ವ್ಯರ್ಥವಾಗುವವಲ್ಲ !

**ಕೃ.**—ಶಾಸ್ತ್ರದಂತೆ ನಡೆಯಬೇಕೆಂಬುವನ ಪುರುಷಪ್ರಯತ್ನಕ್ಕೂ ಅವಕಾಶವಿದೆ. ಅದೇನೆಂದರೆ– ಇಂದ್ರಿಯಗಳು ಹೊರಗಣ ವಿಷಯಗಳ ಕಡೆಗೆ ಹೋಗುವಾಗ ಸ್ವಭಾವವಾಗಿ ಏನಾದರೊಂದು ಬೇಕೆಂದೋ ಬೇಡವೆಂದೋ ಹೊರಡುತ್ತಿರುತ್ತವೆಯಷ್ಟೆ. ಶಾಸ್ತ್ರದಂತೆ ನಡೆಯಬೇಕೆನ್ನುವವನು ಆ ಬೇಕುಬೇಡೆಂಬುವುಗಳಿಗೆ ಒಳಗಾಗಬಾರದು. ಅವಕ್ಕೆ ಒಳಗಾದೊಡನೆ ಅವು ಅವನನ್ನು ಅವನ ಸ್ವಧರ್ಮದಿಂದ ತಪ್ಪಿಸಿ ಪರಧರ್ಮಕ್ಕೆ ನೂಕುವವು. ಆ ಬೇಕುಬೇಡೆಂಬುವನ್ನು ತನ್ನ ಹಿಡಿಯೊಳಗಿಟ್ಟುಕೊಂಡರೆ ಆಗ ಅವನು ಹುಟ್ಟುಗುಣದ ಸೆಳೆತಕ್ಕೆ ಸಿಕ್ಕದವನಾಗದೆ ಶಾಸ್ತ್ರವನ್ನು ಹಿಡಿದು ಪುರುಷಪ್ರಯತ್ನದಲ್ಲಿ ಮುಂದುವರಿಯುವವನಾಗುತ್ತಾನೆ. ಆದ್ದರಿಂದ ಬೇಕುಬೇಡೆಂಬುವುಗಳ ಬಲೆಗೆ ಬೀಳಬಾರದು. ಅವೇ ಮನುಷ್ಯನನ್ನು ತಪ್ಪುದಾರಿಗೆಳೆಯತಕ್ಕವುಗಳು. ಅವು ಶಾಸ್ತ್ರಾರ್ಥಕ್ಕೆ ಬೇರೆ ಬಣ್ಣವನ್ನು ಕೊಟ್ಟು ಪರಧರ್ಮವನ್ನು ತನ್ನ ಧರ್ಮವೆಂಬಂತೆ ಕಾಣುವಹಾಗೆ ಮಾಡುವವು. ಪರಧರ್ಮವನ್ನು ಚೆನ್ನಾಗಿ ನಡೆಸುವದಕ್ಕಿಂತಲೂ- ತನ್ನ ಧರ್ಮದಲ್ಲಿ ಕುಂದುಕೊರತೆಗಳಿದ್ದರೂ- ತನ್ನ ಧರ್ಮವೇ ಮೇಲು. ಪರಧರ್ಮವು ಒಂದು ಧರ್ಮವಾದರೂ ಅದು ತನಗೆ ನರಕಕ್ಕೆ ಕಾರಣವಾಗುತ್ತದೆ. ಪರಧರ್ಮದಲ್ಲಿ ಬದುಕುವದಕ್ಕಿಂತಲೂ ತನ್ನ ಧರ್ಮದಲ್ಲಿ ಸಾಯುವದು ಮೇಲು.

**ಅ.**—ಕೃಷ್ಣ, ಇನ್ನೊಮ್ಮೆ ಸಂಕ್ಷೇಪವಾಗಿ ಹೇಳು. ಮನುಷ್ಯನು ಯಾವದರ ಬಲಾತ್ಕಾರದ ಸೆಳೆತಕ್ಕೆ ಸಿಕ್ಕಿ ಪಾಪವನ್ನು ಮಾಡುತ್ತಾನೆ ?

## —ಕರ್ಮಯೋಗದ ಹಗೆ—

**ಕೃ.**—ಮನುಷ್ಯನನ್ನು ಹಾಳುಮಾಡುವ ಆ ಹಗೆಯನ್ನು ಹೇಳುತ್ತೇನೆ; ಕೇಳು. ಬಯಕೆಯೆಂಬುದು ಲೋಕಕ್ಕೆಲ್ಲ ಹಗೆ. ಆ ಬಯಕೆಯೇ ತನಗೇನಾದರೂ ತಡೆಯೊದಗಿದರೆ ಕೋಪದ ರೂಪಕ್ಕೆ ತಿರುಗುತ್ತದೆ. ಬಯಕೆಯೆಂಬುವದು ರಜೋಗುಣದಿಂದ ಹುಟ್ಟಿದ್ದು. ಆದ್ದರಿಂದ ಅದು ಮನುಷ್ಯನನ್ನು ಕರ್ಮದ ಕಡೆಗೆ ಹೊರಡಿಸುವದು. ಬಯಕೆಯಿಂದ

ಹೊರಬಿದ್ದು ಅವರಿವರ ಸೇವೆಯಲ್ಲಿ ತೊಡಗಿ ಗೋಳಾಡುವವರು ಎಲ್ಲೆಲ್ಲಿಯೂ ಇದ್ದಾರೆ. ಬಯಕೆಯ ಹೊಟ್ಟೆ ಬಲು ದೊಡ್ಡದು. ಎಷ್ಟು ಹಾಕಿದರೂ ಅದು ತುಂಬುವದಿಲ್ಲ. ಅದು ಮನುಷ್ಯನಿಂದ ಎಂಥ ಪಾಪವನ್ನಾದರೂ ಮಾಡಿಸುವದು. ಆದ್ದರಿಂದ ಬಯಕೆಯೇ ದೊಡ್ಡ ಹಗೆ.

**ಅ.**—ಕರ್ಮಯೋಗಕ್ಕೆ ಬಯಕೆಯೇ ಹಗೆಯೆಂಬುವದು ಹೇಗೆ ?

**ಕೃ.**—ಹೊಗೆಯು ಬೆಂಕಿಯನ್ನು ಮುಚ್ಚುವಂತೆ, ಧೂಳಿಯು ಕನ್ನಡಿಯನ್ನು ಮರೆಮಾಡುವಂತೆ, ಮತ್ತು ಚರ್ಮದ ಮುಸುಕು ಗರ್ಭವನ್ನು ಸುತ್ತಿರುವಂತೆ ಬಯಕೆಯು ಜ್ಞಾನವನ್ನು ಮುಚ್ಚಿ ಅದನ್ನು ಕಾಣದಂತೆ ಮಾಡಿರುವದು. ಈ ಬಯಕೆಯೆಂಬುದು ಜ್ಞಾನಿಗೆ ಯಾವಾಗಲೂ ಹಗೆ. ಏಕೆಂದರೆ ತಾನು ಅದರಿಂದಲೆ ಹಾನಿಯನ್ನು ಹೊಂದಿದ್ದೇನೆಂದು ಅವನಿಗೆ ಗೊತ್ತು. ಮೂರ್ಖನು ಅದನ್ನು ತಿಳಿಯದೆ ಬಯಕೆಯು ಕಾಣಿಸಿಕೊಂಡಾಗ ಅದನ್ನು ಗೆಳೆಯನಂತೆ ಕಂಡು ಅದರ ಪರಿಣಾಮವಾಗಿ ದುಃಖವಾದಾಗ ಮಾತ್ರ ತಾನು ಬಯಕೆಯಿಂದ ಹಾನಿಯನ್ನು ಹೊಂದಿದೆನೆಂದು ತಿಳಿಯುತ್ತಾನೆ.

**ಅ.**—ಈ ಬಯಕೆಯೆಂಬುವದು ಎಲ್ಲಿ ನೆಲೆಮಾಡಿಕೊಂಡಿರುವದು ? ಅದು ತಿಳಿದರೆ ಅದನ್ನು ಬಡಿದು ಕೆಡವಬಹುದು.

**ಕೃ.**—ಬಯಕೆಗೆ ಇಂದ್ರಿಯ, ಮನಸ್ಸು, ಬುದ್ಧಿ - ಇವೇ ನೆಲೆಗಳು. ಇವುಗಳಲ್ಲಿದ್ದುಕೊಂಡು ಬಯಕೆಯು ಮನುಷ್ಯನನ್ನು ಮರಳುಮಾಡುತ್ತದೆ. ಆದ್ದರಿಂದ ನೀನು ಮೊದಲು ಇಂದ್ರಿಯಗಳನ್ನು ಹಿಡಿತಕ್ಕೆ ತಂದುಕೊಂಡು ಆತ್ಮವಿಷಯಕವಾದ ಜ್ಞಾನವನ್ನೂ ಅದರ ಅನುಭವವನ್ನೂ ಹಾಳುಮಾಡುವ ಪಾಪಿಯಾದ ಬಯಕೆಯನ್ನು ಗೆಲ್ಲು.

**ಅ.**—ಯಾವದರ ಬಲದಿಂದ ಬಯಕೆಯನ್ನು ಗೆಲ್ಲಬಹುದು ?

**ಕೃ.**—ಈ ಸ್ಥೂಲವಾದ ದೇಹಕ್ಕಿಂತ ಸೂಕ್ಷ್ಮವಾದ ಜ್ಞಾನೇಂದ್ರಿಯಗಳು ಹೆಚ್ಚಿನವು. ಈ ಇಂದ್ರಿಯಗಳಿಗಿಂತ ಅವುಗಳ ಮೇಲೆ ಯಜಮಾನನಂತಿರುವ ಮನಸ್ಸು ಹೆಚ್ಚಿನದು. ಹಾಗೋ ಹೀಗೋ ಎಂದು ಹೊಯ್ದಾಡುವ ಅಂತಃಕರಣದ ಸ್ವರೂಪವಾದ ಮನಸ್ಸಿಗಿಂತ ಹೀಗೆಯೇ ಸರಿಯೆಂದು ಗೊತ್ತುಮಾಡುವ ಬುದ್ಧಿ ಹೆಚ್ಚಿನದು. ಇಂದ್ರಿಯ ಮೊದಲಾದವುಗಳಲ್ಲಿಯು-

ಕೊಂಡು. ಬಯಕೆಯು ಜ್ಞಾನವನ್ನು ಮುಸುಕಿ ಧ್ಯಾನವನ್ನು ಮರುಳು ಮಾಡುವದೋ ಆ ಶತ್ರು ಬುದ್ಧಿಗಿಂತ ಮೇಲಿನವನು. ಹೀಗೆಂದು ತಿಳಿದು ತನ್ನ ಮನಸ್ಸನ್ನು ತಾನು ಬಿಗಿಹಿಡಿದು ಆ ಬಲಶಾಲಿಯಾದ ಬಯಕೆಯನ್ನು ಗೆಲ್ಲಬೇಕು.

ಅ.—ಈಗ ನೀನು ಹೇಳಿದ ಜ್ಞಾನಯೋಗವೂ ಕರ್ಮಯೋಗವೂ ಮೊದಲು ಹೊರಬಿದ್ದದ್ದು ಹೇಗೆ?

## —ಅವತಾರದ ಗುಟ್ಟು—

ಕೃ.—ಈ ಜಗತ್ತನ್ನು ಸೃಷ್ಟಿಸಿದ ಮೊದಲಲ್ಲಿಯೇ ಜಗತ್ತನ್ನು ಕಾಪಾಡುವ ಕ್ಷತ್ರಿಯರಿಗೆ ಬಲವನ್ನು ಕೊಡುವದಕ್ಕಾಗಿ ಇವುಗಳನ್ನು ನಾನು ಸೂರ್ಯನಿಗೆ ಹೇಳಿದೆನು. ಈ ಯೋಗಗಳ ಬಲದಿಂದ ಕೂಡಿದವರು ಜಗತ್ತಿನಲ್ಲಿ ಸಮಾಧಾನವನ್ನು ನೆಲೆಗೊಳಿಸುವದಕ್ಕೆ ಸಮರ್ಥರಾಗುತ್ತಾರೆ. ಈ ಯೋಗಗಳಿಂದ ದೊರೆಯುವ ಮೋಕ್ಷವೆಂಬುದು ಎಂದೆಂದಿಗೂ ಅಚ್ಚಳಿಯುವಂಥದ್ದಲ್ಲ. ಆ ಸೂರ್ಯನು ಅದನ್ನು ಮನುವಿಗೆ ಹೇಳಿದನು, ಮನುವೂ ಅದನ್ನು ಮೊದಲನೆ ಅರಸನೂ ತನ್ನ ಮಗನೂ ಆದ ಇಕ್ಷ್ವಾಕುವಿಗೆ ಹೇಳಿದನು. ಹೀಗೆ ಈ ಯೋಗಗಳು ಕ್ಷತ್ರಿಯಪರಂಪರೆಯಿಂದ ನಡೆದುಕೊಂಡು ಬಂದಿವೆ. ರಾಜರೂ ಆಗಿ ಋಷಿಗಳೂ ಆಗಿದ್ದವರು ಈ ಯೋಗಗಳನ್ನು ತಿಳಿದುಕೊಂಡರು. ಈಚೆಗೆ ಬಹುಕಾಲವು ಕಳೆದುಹೋದದ್ದರಿಂದ ಆ ಸಂಪ್ರದಾಯವು ಬಿಟ್ಟುಹೋಗಿದೆ. ಮನೋದಾರ್ಢ್ಯವಿಲ್ಲದ್ದರಿಂದ ಇಂದ್ರಿಯಗಳನ್ನು ಬಿಗಿಹಿಡಿಯಲಾರದವರ ದೆಸೆಯಿಂದ ಮೂಲೆಗೆ ಬಿದ್ದುಹೋಗಿದ್ದ ಆ ಹಿಂದಿನ ಕಾಲದ ಈ ಯೋಗವನ್ನೇ, ನೀನು ನನ್ನ ಗೆಳೆಯನೂ ಭಕ್ತನೂ ಆದವನೆಂದು, ನಿನಗೆ ಈಗ ಹೇಳಿದೆನು. ಇದು ಬಹು ಗೋಪ್ಯವಾಗಿಡತಕ್ಕದ್ದು.

ಅ.—ನೀನು ಹುಟ್ಟಿದ್ದು ಈಚೆಗೆ ವಸುದೇವನ ಮನೆಯಲ್ಲಿ; ಸೂರ್ಯ ಹುಟ್ಟಿದ್ದು ಸೃಷ್ಟಿಯ ಮೊದಲಲ್ಲಿ. ಈ ಯೋಗಗಳನ್ನು ನೀನೇ ಅವನಿಗೆ ಹೇಳಿದೆಯೆಂದೂ ಆ ನೀನೇ ನನಗೆ ಈಗ ಹೇಳುತ್ತಿರುವೆಯೆಂದೂ. ನಾನು ಹೇಗೆ ನಂಬಲಿ?

**ಕೃ.**—ಅರ್ಜುನ, ನನಗೆ ಎಷ್ಟೋ ಜನ್ಮಗಳು ಹಿಂದೆ ಆಗಿಹೋದವು. ನಿನಗೂ ಎಷ್ಟೋ ಜನ್ಮಗಳು ಆಗಿಹೋದವು. ಅವೆಲ್ಲ ನನಗೆ ಗೊತ್ತು; ನಿನಗೆ ತಿಳಿಯದು. ಏಕೆಂದರೆ ನಿನ್ನ ಜ್ಞಾನಶಕ್ತಿಗೆ ಧರ್ಮದ ಮತ್ತು ಅಧರ್ಮದ ಮುಸುಕು ಮುಚ್ಚಿಕೊಂಡಿದೆ. ನನಗೆ ಹಾಗಿಲ್ಲ. ನನ್ನ ಜ್ಞಾನವು ಯಾವ ಮುಸುಕೂ ಇಲ್ಲದೆ ಝಳಝಳ ಬೆಳಗುತ್ತಿದೆ.

**ಅ.**—ಧರ್ಮದ ಮತ್ತು ಅಧರ್ಮದ ಮುಸುಕಿಲ್ಲದವನಾದರೆ ನೀನು ಹುಟ್ಟಿದ್ದು ಹೇಗೆ?

**ಕೃ.**—ನನಗೆ ಹುಟ್ಟೆಂಬುದಿಲ್ಲ. ನನ್ನ ಜ್ಞಾನಶಕ್ತಿಯು ಕುಂದತಕ್ಕದ್ದೂ ಅಲ್ಲ. ನಾನು ಚರಾಚರಪ್ರಪಂಚಕ್ಕೆಲ್ಲ ಒಡೆಯನು. ಯಾವದರ ವಶದಲ್ಲಿ ಈ ಜಗತ್ತೆಲ್ಲ ಇರುವದೊ ಯಾವದರ ಮಂಕುಬೂದಿಯಿಂದ ಮನುಷ್ಯನು ತನ್ನ ಆತ್ಮನನ್ನು ತಾನು ತಪ್ಪುತಿಳಿಯುವವನಾಗುತ್ತಾನೋ ಆ ಸತ್ತ್ವರಜಸ್ತಮೋಗುಣಗಳಿಂದ ಕೂಡಿದ ನನ್ನ ಮಾಯಶಕ್ತಿಯಿಂದ ನಾನು ದೇಹವುಳ್ಳವನಾಗಿರುವಂತೆ ಹುಟ್ಟುತ್ತೇನೆ. ಹೀಗೆ ನಾನು ನನ್ನ ಮಾಯೆಯಿಂದ ಹುಟ್ಟಿದವನಂತೆ ಕಾಣುವೆನೇ ಹೊರತು ಲೋಕದಲ್ಲಿ ಎಲ್ಲರೂ ಹುಟ್ಟುವಂತೆ ನಾನು ನಿಜವಾಗಿ ಹುಟ್ಟಿಲ್ಲ.

**ಅ.**—ಹಾಗಾದರೆ ನೀನು ಹುಟ್ಟಿದಂತೆ ಕಾಣಿಸಿಕೊಳ್ಳುವದಕ್ಕೇನಾದರೂ ಸಮಯ ಉಂಟೋ ಹೇಗೆ?

ಕೃ.—ಜನರಿಗೆಲ್ಲ ಈ ಲೋಕದ ಸುಖಕ್ಕೂ ಪರಲೋಕದ ಸುಖಕ್ಕೂ ಸಾಧನವಾದ ವರ್ಣಾಶ್ರಮಧರ್ಮಗಳನ್ನು ನೆಲಮಾಡಿಸಿ ಅಧರ್ಮವು ತಲೆಯೆತ್ತಿದಾಗ ನಾನು ನನ್ನನ್ನು ಹೀಗೆ ಹುಟ್ಟಿಸುತ್ತೇನೆ.

**ಅ.**—ನಿನ್ನ ಹುಟ್ಟಿಗೆ ಉದ್ದೇಶವೇನು?

**ಕೃ.**—ಒಳ್ಳೆ ದಾರಿಯಲ್ಲಿರುವ ಸಾಧುಗಳನ್ನು ಕಾಪಾಡುವದು, ಪಾಪಿಗಳನ್ನು ಬಲಿಹಾಕುವದು ಮತ್ತು ಧರ್ಮವನ್ನು ಚೆನ್ನಾಗಿ ನೆಲೆಗೊಳಿಸುವದು.

**ಅ.**—ಚೆನ್ನಾಗಿದೆ! ಇದು ನನಗೆ ಗೊತ್ತೇ ಇರಲಿಲ್ಲ.

**ಕೃ.**—ನನ್ನ ಹುಟ್ಟು ಹೀಗೆ ಮಾಯೆಯಿಂದಾಗುವದೆಂಬ ಮತ್ತು ನನ್ನ ಕರ್ಮವು ಸಾಧುಗಳ ರಕ್ಷಣೆ ಮೊದಲಾದದ್ದೆಂಬ ದಿವ್ಯವಾದ ಈ ವಿಷ

ಯವನ್ನು ಇದ್ದುದಿದ್ದಂತೆ ಯಾರು ತಿಳಿಯುತ್ತಾರೋ ಅವರು ಈ ದೇಹವನ್ನು ಬಿಟ್ಟ ಮೇಲೆ ಮತ್ತೆ ಹುಟ್ಟುವದಿಲ್ಲ. ಅವರು ನನ್ನನ್ನು ಸೇರಿ ಮೋಕ್ಷವನ್ನು ಪಡೆಯುವರು. ಬೇರೆ ಯಾವ ಬಗೆಯ ತಪಸ್ಸೂ ಇಲ್ಲದೆ ಈ ನನ್ನನ್ನು ಈಶ್ವರನೆಂದು ತಿಳಿದು ನನ್ನಲ್ಲಿಯೇ ಮನಸ್ಸಿಟ್ಟವರಾಗಿ ಈ ವಿಧವಾದ ಜ್ಞಾನವೆಂಬ ತಪಸ್ಸಿನಿಂದ ಶುದ್ಧರಾದವರಾಗಿ ಪ್ರೀತಿ, ಹಗೆತನ, ಹೆದರಿಕೆ, ಸಿಟ್ಟು- ಈ ಮೊದಲಾದವುಗಳನ್ನೆಲ್ಲ ಕಳೆದುಕೊಂಡು ಎಷ್ಟೋ ಜನರು ನನ್ನನ್ನು ಸೇರಿ ಮೋಕ್ಷವನ್ನು ಪಡೆದಿದ್ದಾರೆ.

ಅ.—ಹೀಗೆ ನೀನು ಕೆಲವರನ್ನು ಮಾತ್ರ ನಿನ್ನಲ್ಲಿ ಸೇರಿಸಿಕೊಳ್ಳುವೆಯಾದರೆ ನಿನಗೆ ಒಬ್ಬರ ಮೇಲೆ ಪ್ರೀತಿ, ಒಬ್ಬರ ಮೇಲೆ ಹಗೆತನ- ಇದ್ದಂತಾಯಿತಲ್ಲ !

ಕೃ.—ಯಾರು ಯಾವ ಬಯಕೆಯಿಂದ ನನ್ನ ಬಳಿಗೆ ಬರುತ್ತಾರೋ ಅವರಿಗೆ ಆ ಬಯಕೆಯನ್ನು ನಾನು ತೀರಿಸಿಕೊಡುತ್ತೇನೆ. ಮೋಕ್ಷವನ್ನು ಬಯಸದವರಿಗೆ ಮೋಕ್ಷವು ಹೇಗೆ ಸಿಕ್ಕೀತು ? ಏನಾದರೊಂದು ಫಲದ ಬಯಕೆಯೂ ಮೋಕ್ಷದ ಬಯಕೆಯೂ ಒಂದೇ ಕಾಲದಲ್ಲಿರಲಾರವು. ಆದ್ದರಿಂದ ಫಲವನ್ನು ಬಯಸಿ ಬೇರೆ ದೇವತೆಗಳ ರೂಪಕ್ಕೆ ಶರಣುಬಂದವರಿಗೆ ಆ ದೇವತೆಗಳ ರೂಪದಿಂದಲೇ ಫಲವನ್ನು ಕೊಡುತ್ತೇನೆ. ಎಲ್ಲರ ಅಂತರ್ಯಾಮಿಯೂ ನಾನೇ ಆದ್ದರಿಂದ ಅವರು ದೇವತೆಗಳಿಗೆ ಶರಣೆಂದರೂ ಅದು ನನಗೇ ಸೇರುವದು. ವರ್ಣಾಶ್ರಮದ ಕಟ್ಟಿನೊಳಗೆ ಸೇರಿದ ಮನುಷ್ಯರೆಲ್ಲ ನನ್ನ ದಾರಿಯನ್ನೇ ಹಿಡಿದವರು. ಫಲವನ್ನು ಬಯಸದೆ ಮೋಕ್ಷವನ್ನು ಬಯಸಿದವರಿಗೆ ನಾನು ಜ್ಞಾನವನ್ನು ಕೊಡುತ್ತೇನೆ. ಜ್ಞಾನದಿಂದ ಅವರು ಮೋಕ್ಷವನ್ನು ಪಡೆಯುತ್ತಾರೆ. ನನಗೆ ಒಬ್ಬರ ಮೇಲೆ ಪ್ರೀತಿ, ಒಬ್ಬರ ಮೇಲೆ ಹಗೆತನ- ಹೀಗೇನೂ ಇಲ್ಲ.

ಅ.—ನೀನು ಜ್ಞಾನದಂಥ ಹೆಚ್ಚಿನ ಫಲವನ್ನು ಕೊಡುವ ಸಮರ್ಥನಾಗಿರುವಾಗ ಜನರು ಅದನ್ನು ಬಯಸಿ ನಿನಗೇ ಸಾಕ್ಷಾತ್ತಾಗಿ ಏಕೆ ಶರಣುಬರುವದಿಲ್ಲ ?

ಕೃ.—ಜನರು ಫಲವನ್ನು ಬಯಸಿ ಇಂದ್ರನೆ ಮೊದಲಾದ ದೇವತೆಗಳಿಗೆ ಶರಣೆನ್ನುವದು ಬಹಳ. ಏಕೆಂದರೆ ಈ ಮನುಷ್ಯಲೋಕದಲ್ಲಿ ಫಲವು

ದೊರೆಯುವದು ತಡವಾಗುವದಿಲ್ಲ. ಬೇರೆ ಲೋಕಗಳಲ್ಲಿಯೂ ಫಲವು ದೊರೆತರೂ ಮನುಷ್ಯಲೋಕದಲ್ಲಿರುವ ವರ್ಣಾಶ್ರಮಕರ್ಮಗಳಿಂದ ಫಲವು ಬೇಗ ದೊರೆಯುತ್ತದೆ.

**ಅ.**--ವರ್ಣಾಶ್ರಮದ ಕಟ್ಟಿನೊಳಗೆ ಸೇರಿದ ಮನುಷ್ಯರೆಲ್ಲ ನಿನ್ನ ದಾರಿಯನ್ನೆ ಹಿಡಿಯುವರೆಂದು ತಿಳಿಸುವದು ಹೇಗೆ ?

**ಕೃ.**--ಗುಣವನ್ನೂ ಕರ್ಮವನ್ನೂ ಲಕ್ಷ್ಯದಲ್ಲಿಟ್ಟುಕೊಂಡು ವಿಭಾಗ ಮಾಡಿ ನಾಲ್ಕು ವರ್ಣಗಳನ್ನು ಸೃಷ್ಟಿಸಿರುವವನು ನಾನೆ. ಸತ್ತ್ವಗುಣ ವನ್ನು ಹೆಚ್ಚಾಗಿ ಉಳ್ಳವರಾಗಿ ಮನಸ್ಸನ್ನೂ ಇಂದ್ರಿಯಗಳನ್ನೂ ಬಿಗಿಹಿಡಿದು ತಪಸ್ಸು ಮೊದಲಾದವುಗಳನ್ನು ಮಾಡುವವರು ಬ್ರಾಹ್ಮಣರು. ಸತ್ತ್ವ ಗುಣದಿಂದ ಕೂಡಿದ ರಜೋಗುಣವುಳ್ಳವರಾಗಿ ಶೌರ್ಯ, ತೇಜಸ್ವಿತೆ- ಮೊದ ಲಾದವುಗಳಿಂದಾಗುವ ಕರ್ಮವನ್ನು ಮಾಡುವವರು ಕ್ಷತ್ರಿಯರು. ತಮೋ ಗುಣದಿಂದ ಕೂಡಿದ ರಜೋಗುಣವುಳ್ಳವರಾಗಿ ವ್ಯವಸಾಯ ಮೊದಲಾದವು ಗಳನ್ನು ಮಾಡುವವರು ವೈಶ್ಯರು. ರಜೋಗುಣದಿಂದ ಕೂಡಿದ ತಮೋ ಗುಣವುಳ್ಳವರಾಗಿ ಸೇವಾವೃತ್ತಿಯನ್ನು ಮಾಡುವವರು ಶೂದ್ರರು. ಈ ನಾಲ್ಕು ವರ್ಣಗಳ ವಿಭಾಗವು ಮನುಷ್ಯಲೋಕದಲ್ಲಿಯೇ ಹೊರತು ಬೇರೆ ಲೋಕದಲ್ಲಿಲ್ಲ.

**ಅ.**—ನೀನು ಈ ನಾಲ್ಕು ವರ್ಣಗಳನ್ನು ಹುಟ್ಟಿಸಿದ ಕರ್ತೃವಾದ ಮೇಲೆ ಅವರ ಫಲವನ್ನುಣ್ಣುವ ಭೋಕ್ತೃವೂ ಆಗಿ ಎಲ್ಲರಂತೆ ಹುಟ್ಟಿ ಸಾಯುತ್ತಿರಬೇಕಷ್ಟೆ ?

**ಕೃ.**—ಈ ನನ್ನ ಕರ್ತೃತ್ವವು ಮಾಯೆಯಿಂದಲೆ ಹೊರತು ನಿಜವಾದ ದ್ದಲ್ಲ. ನಾನು ನನ್ನ ಸ್ವರೂಪದಿಂದ ಏನನ್ನೂ ಮಾಡುವವನಲ್ಲ. ನಾನು ಮಾಡುತ್ತೇನೆಂಬ ಅಹಂಕಾರವೂ ಫಲದ ಬಯಕೆಯೂ ಯಾರಿಗೆ ಇರು ವದೊ ಅವರಿಗೆ ಆ ಕರ್ಮದ ಫಲಗಳು ಬಂದು ಹತ್ತಿಕೊಳ್ಳುವವು. ನಾನು ಮಾಡುವವನೆಂಬಹಂಕಾರವೂ ಫಲದ ಬಯಕೆಯೂ ನನಗಿಲ್ಲವಾದ್ದರಿಂದ ಆ ಕರ್ಮವು ನನಗೆ ದೇಹವನ್ನು ತಂದು ಗಂಟುಹಾಕಲಾರದು. ಯಾರು ನನ್ನನ್ನು ಮಾಡುವವನಲ್ಲವೆಂದೂ ಫಲದ ಬಯಕೆ ಇಲ್ಲದವನೆಂದೂ ತಿಳಿ ಯುತ್ತಾರೊ ಅವರಿಗೆ ಕೂಡ ಅವರ ಕರ್ಮಗಳು ದೇಹವನ್ನು ತಂದು ಗಂಟು

ಹಾಕಲಾರವು. ಹಿಂದೆ ಮೋಕ್ಷವನ್ನು ಬಯಸಿದವರೆಲ್ಲ ಹೀಗೆ ತಿಳಿದೇ ಮಾಡುತ್ತ ಬಂದರು. ಬಹಳ ಬಹಳ ಹಿಂದಿನವರು ಕೂಡ ಮಾಡುತ್ತ ಬಂದಿರುವಂತೆ ನೀನು ಕರ್ಮವನ್ನೆ ಮಾಡು. ಸುಮ್ಮನಿರಬೇಡ. ನೀನು ಅಜ್ಞಾನಿಯಾದರೆ ಚಿತ್ತಶುದ್ಧಿಗಾಗಿ ಮಾಡು; ಜ್ಞಾನಿಯಾದರೆ ಇತರರಿಗೆ ಮೇಲುಪಂಕ್ತಿಯಾಗುವದಕ್ಕಾಗಿ ಮಾಡು. ಜನಕನೇ ಮೊದಲಾದಂಥ ಬಹಳ ಬಹಳ ಹಿಂದಿನವರೆಲ್ಲ ಅದನ್ನು ಮಾಡಿದ್ದಾರೆಂಬುದನ್ನು ಲಕ್ಷ್ಯಕ್ಕೆ ತಂದುಕೊ.

**ಅ.**—ಕರ್ಮವನ್ನು ಮಾಡೆಂದು ನೀನು ಹೇಳಿದರೇ ಸಾಕು; ಮಾಡುತ್ತೇನೆ. ಹಿಂದಿನವರೆಲ್ಲ ಮಾಡಿದ ಮಾತೇಕೆ?

**ಕೃ.**—ಏಕೆಂದರೆ ಕರ್ಮದ ವಿಷಯದಲ್ಲಿ ತಿಳಿಯತಕ್ಕದ್ದು ಬಹಳ ಇದೆ. ಕರ್ಮ ಯಾವದೊ! ಅಕರ್ಮ ಯಾವದೊ! ಒಳ್ಳೆ ಬುದ್ಧಿಶಾಲಿಗಳು ಕೂಡ ಈ ವಿಷಯದಲ್ಲಿ ಭ್ರಾಂತರಾಗುತ್ತಾರೆ. ಆದ್ದರಿಂದ ಕರ್ಮದ ಮತ್ತು ಅಕರ್ಮದ ಸ್ವರೂಪವನ್ನು ನಿನಗೆ ಹೇಳುತ್ತೇನೆ. ಅದನ್ನು ತಿಳಿದುಕೊಂಡರೆ ಈ ಸಂಸಾರದ ಅಮಂಗಲವು ಬಿಟ್ಟುಹೋಗುತ್ತದೆ.

**ಅ.**—ಕರ್ಮವೆಂದರೆ ದೇಹ ಮೊದಲಾದವುಗಳು ಏನನ್ನಾದರೂ ಮಾಡುವದೆಂದೂ ಅಕರ್ಮವೆಂದರೆ ಏನೂ ಮಾಡದೆ ಸುಮ್ಮನಿರುವದೆಂದೂ ಲೋಕದಲ್ಲಿ ಪ್ರಸಿದ್ಧವಾಗಿದೆಯಲ್ಲ!

## —ಕರ್ಮದ ಮತ್ತು ಅಕರ್ಮದ ಒಗಟು—

**ಕೃ.**—ಹಾಗಲ್ಲ. ಈ ವಿಷಯದಲ್ಲಿ ತಿಳಿಯತಕ್ಕದ್ದು ಬಹಳ ಇದೆ. ಶಾಸ್ತ್ರದಲ್ಲಿ ಮಾಡಬೇಕೆಂದು ಹೇಳಿರುವ ಕರ್ಮಗಳನ್ನು ಮಾಡುವದರ ತತ್ತ್ವವನ್ನೂ ತಿಳಿಯಬೇಕು; ಮತ್ತು ಮಾಡದಿರುವದರ ತತ್ತ್ವವನ್ನೂ ತಿಳಿಯಬೇಕು. ಕರ್ಮ ಮೊದಲಾದವುಗಳ ತತ್ತ್ವದ ಗುಟ್ಟು ಬಹಳ ಒಗಟಾದದ್ದು.

**ಅ.**—ಅದೇನು ಗುಟ್ಟು?

**ಕೃ.**—ಹೇಳುತ್ತೇನೆ; ಕೇಳು. ಏನನ್ನಾದರೂ ಮಾಡುವದೆಲ್ಲ ಕರ್ಮವಷ್ಟೆ. ಅದನ್ನು ಅಕರ್ಮವೆಂದು (ಎಂದರೆ ಸುಮ್ಮನಿದ್ದಂತೆಯೆಂದು) ತಿಳಿ

ಯಬೇಕು. ಇನ್ನು ಅಕರ್ಮವನ್ನು - ಎಂದರೆ ಸುಮ್ಮನಿರುವದನ್ನು - ಕರ್ಮವೆಂದು (ಎಂದರೆ ತಾನು ಮಾಡಿದಂತೆ) ತಿಳಿಯಬೇಕು. ಏಕೆಂದರೆ ಸುಮ್ಮನಿರುವದಕ್ಕಾದರೂ ಮನುಷ್ಯಪ್ರಯತ್ನವು ಬೇಕು. ಆದ್ದರಿಂದ ಅದು ಕರ್ಮವೆನಿಸುವದು. ಹೀಗೆ ತಿಳಿದವನು ಮನುಷ್ಯರಲ್ಲೆಲ್ಲ ಬುದ್ಧಿವಂತನು. ಅವನೇ ಯೋಗಿ. ಅವನು ಸಮಸ್ತಕರ್ಮಗಳನ್ನೂ ಮಾಡಿದವನಾಗುವನು.

**ಅ.**—ಒಗಟಿನ ಗುಟ್ಟು ಬಹಳ ತೊಡಕಾಗಿದೆಯಲ್ಲ! ಕರ್ಮವನ್ನು ಅಕರ್ಮವೆಂದು ಮುಂತಾಗಿ ತಿಳಿಯುವದು ವಿರುದ್ಧವಲ್ಲವೆ?

**ಕೃ.**—ಅಲ್ಲ. ವಿರುದ್ಧವಾದದ್ದನ್ನು ತಿಳಿದರೆ ಅಮಂಗಲದಿಂದ ಹೇಗೆ ಬಿಡುಗಡೆಯಾದೀತು? ನಾನು ಹೇಳಿದ್ದು ವಿರುದ್ಧವಲ್ಲ; ಬಿಸಿಲುಗುದುರೆಯನ್ನು ನೀರೆಂದರಿಯುವಂತೆ ಜನರು ತಿಳಿದಿರುವದು ವಿರುದ್ಧ. ಜನರ ತಿಳಿವಳಿಕೆಯ ತಪ್ಪನ್ನು ತೋರಿಸುತ್ತೇನೆ; ನೋಡು. ಒಬ್ಬನು ಹಡಗಿನಲ್ಲಿ ಕುಳಿತು ಮುಂದೆ ಸಾಗುತ್ತಿರುತ್ತಾನೆ. ಆಗ ದಡದಲ್ಲಿರುವ ಮರಗಳು ನಿಜವಾಗಿ ಕದಲದೆ ಇದ್ದರೂ ಅವನು ತನಗೆದುರಾಗಿ ಮರಗಳು ಓಡಿ ಹೋಗುತ್ತಿರುವಂತೆ ತಿಳಿಯುತ್ತಾನೆ. ಮುಂದೆ ಸಾಗುವದೆಂಬ ಕರ್ಮವು ತನ್ನಲ್ಲಿದ್ದರೂ ತಾನು ಸುಮ್ಮನಿರುವೆನೆಂದೂ ದಡದಲ್ಲಿರುವ ಮರಗಳು ಸುಮ್ಮನಿದ್ದರೂ ಅವು ಮುಂದೆ ಸಾಗುತ್ತಿರುವವೆಂದೂ ಅವನು ತಪ್ಪುತಿಳಿವಳಿಕೆಯನ್ನು ಹೊಂದಿರುತ್ತಾನೆ. ಅದನ್ನು ತಿದ್ದಿಕೊಳ್ಳಬೇಕಾದರೆ ಅವನು ತಾನು ತಿಳಿದಿರುವ ಕರ್ಮವೆಂಬುದನ್ನು ಅಕರ್ಮವನ್ನಾಗಿಯೂ ಅಕರ್ಮವೆಂಬದನ್ನು ಕರ್ಮವಾಗಿಯೂ ನೋಡಬೇಕು. ಈಗ ಜನರು ತಿದ್ದಿಕೊಳ್ಳಬೇಕಾಗಿರುವ ತಪ್ಪುತಿಳಿವಳಿಕೆಯೇನೆಂದರೆ- ಆತ್ಮನು ಯಾವ ಕೆಲಸವನ್ನೂ ಮಾಡುವವನಲ್ಲವೆಂದು ವೇದಶಾಸ್ತ್ರಗಳು ಹೇಳುತ್ತವೆ. ಹೀಗಿರುವಾಗ ದೇಹ ಮೊದಲಾದವುಗಳು ಮಾಡುವ ಕರ್ಮವನ್ನು ಆತ್ಮನದೆಂದು ತಪ್ಪಾಗಿ ತಿಳಿದು ಆತ್ಮನನ್ನು ಮಾಡುವ ಕರ್ತನೆಂಬ ರೂಢಿಯುಂಟಾಗಿದೆ. ಅದರಂತೆ ಕೆಲಸವನ್ನು ಮಾಡಿ ಸೋತು ಕೈಕಾಲುಗಳನ್ನು ಮುದುರಿಕೊಂಡು ಹಾಯಾಗಿ ಒಂದು ಕಡೆ ಪ್ರಯತ್ನಪೂರ್ವಕವಾಗಿ ಕುಳಿತಾಗ ಅದರಿಂದಾದ ಸುಖವನ್ನು ಆತ್ಮನದೆಂದು ತಪ್ಪಾಗಿ ತಿಳಿದು ತಾನು (ಆತ್ಮನು) ಏನೂ ಮಾಡದೆ ಸುಖವಾಗಿದ್ದೇನೆಂಬ ರೂಢಿಯುಂಟಾಗಿದೆ. ಇದನ್ನು ತಿದ್ದಿಕೊಳ್ಳುವದಕ್ಕಾಗಿ

ಜನರು ತಮ್ಮ ರೂಢಿಯ ಕರ್ಮವನ್ನು ಅಕರ್ಮವೆಂದೂ ರೂಢಿಯ ಅಕರ್ಮವನ್ನು ಕರ್ಮವೆಂದೂ ತಿಳಿಯುವವರಾಗಬೇಕು.

ಅ.--ಕರ್ಮವನ್ನು ಅಕರ್ಮವೆಂದು ತಿಳಿದ ಮೇಲೆ ಅವನು ತಾನು ನಡೆಸುತ್ತ ಬಂದಿದ್ದ ಕರ್ಮದಲ್ಲಿ ಹೇಗೆ ವ್ಯವಹರಿಸುತ್ತಿರುವನು ?

**ಕೃ.**—ಅವನು ಮಾಡುವ ಯಾವ ಕರ್ಮದಲ್ಲಿಯೂ ಯಾವ ಸಂಕಲ್ಪವೂ ಇರುವದಿಲ್ಲ; ಯಾವ ಬಯಕೆಯೂ ಇರುವದಿಲ್ಲ. ಅವನು ಸುಮ್ಮನೆ ಏನನ್ನಾದರೂ ಮಾಡುತ್ತಿರುವನು. ಅವನು ಕರ್ಮದಲ್ಲಿ ತೊಡಗಿ ವ್ಯವಹರಿಸುವವನಾದರೆ ಜನರಿಗೆ ಮೇಲುಪಙ್ಕ್ತಿಯಾಗಿರಲೆಂದು ಹಾಗೆ ಮಾಡುವನು. ಕರ್ಮಗಳನ್ನು ಬಿಟ್ಟವನಾಗಿ ವ್ಯವಹರಿಸುವವನಾದರೆ ಜೀವನಯಾತ್ರೆ ನಡೆಯುವದಕ್ಕಾಗಿ ಹಾಗೆ ಮಾಡುವನು. ಕರ್ಮವನ್ನು ಅಕರ್ಮವೆಂದು ಮುಂತಾಗಿ ನೋಡುವ ಜ್ಞಾನವೆಂಬ ಬೆಂಕಿಯಿಂದ ಅವನ ಪುಣ್ಯಪಾಪಗಳೆಲ್ಲ ಸುಟ್ಟುಹೋಗಿರುವವು. ಅವನು ಕರ್ಮವನ್ನು ಮಾಡಿದರೂ ಅದು ಅಕರ್ಮವೆ. ಏಕೆಂದರೆ ಅವನಿಗೆ ಆತ್ಮನು ಮಾಡುವವನಲ್ಲವೆಂಬ ತಿಳಿವಳಿಕೆ ಇದೆ. ಅವನು ಕರ್ಮಗಳನ್ನೆಲ್ಲ ತೀರ ಬಿಟ್ಟೇ ಬಿಡಬಹುದಾದರೂ ಹಾಗೆ ಮಾಡುವದು ಅಸಂಭವವಾದ್ದರಿಂದ ಜನರಿಗೆ ಮೇಲುಪಙ್ಕ್ತಿಯಾಗಿರಬೇಕೆಂದೋ ಶಿಷ್ಟರ ನಿಂದೆಗೆ ಗುರಿಯಾಗಬಾರದೆಂದೋ ಹಿಂದಿನಂತೆ ಅವನು ಕರ್ಮವನ್ನು ಮಾಡಿದರೂ ಏನೂ ಮಾಡಿದ ಹಾಗಲ್ಲ.

ಅ.--ಕರ್ಮವನ್ನಾರಂಭಿಸುವದಕ್ಕೆ ಮೊದಲೇ ಆತ್ಮನು ಮಾಡುವವನಲ್ಲವೆಂಬ ತಿಳಿವಳಿಕೆ ಇದ್ದವನ ನಡೆವಳಿಕೆ ಹೇಗೆ ?

**ಕೃ.**—ಅವನಿಗೆ ಆಸೆ ಇರುವದಿಲ್ಲ. ಅವನು ದೇಹವನ್ನೂ ಇಂದ್ರಿಯಗಳನ್ನೂ ತನ್ನ ಹಿಡಿತದಲ್ಲಿಟ್ಟುಕೊಂಡಿರುವನು. ವ್ಯವಹಾರದ ಉಪಕರಣಗಳೇನೇನೂ ಅವನಲ್ಲಿರುವದಿಲ್ಲ. ಸುಮ್ಮನೆ ಬದುಕಿರುವಷ್ಟರ ಮಟ್ಟಿಗೆ ತಾನು ಮಾಡುವವನೆಂಬ ಅಭಿಮಾನವಿಲ್ಲದೆ ಅವನು ಏನನ್ನಾದರೂ ಮಾಡಿದರೂ ಅದು ಅವನಿಗೆ ಅಂಟುವದಿಲ್ಲ.

ಅ.—ಅವನು ಏನನ್ನೂ ಮಾಡದೆ ಇರುವವನಾದರೂ ಹೊಟ್ಟೆಗಾಗಿ ತಿರಿಯುವದನ್ನಾದರೂ ಮಾಡಬೇಕಾದೀತಲ್ಲವೆ ?

**ಕೃ.**--ಅವನು ತಾನಾಗಿ ದೊರೆತದ್ದೆ ಸಾಕೆನ್ನುವನು. ಶೀತ, ಉಷ್ಣ-

ಮೊದಲಾದವುಗಳು ಒಡಿದರೂ ಅವನ ಮನಸ್ಸು ಅಳುಕುವದಿಲ್ಲ. ತಾನಾಗಿ ಏನಾದರೂ ದೊರೆಯಲಿ, ಬಿಡಲಿ; ಅವನು ಅದನ್ನು ಮನಸ್ಸಿಗೆ ಹಚ್ಚಿಕೊಳ್ಳುವದಿಲ್ಲ. ಒಂದು ವೇಳೆ ಬದುಕಿರುವದಕ್ಕಾಗಿ ತಿರಿಯುವದಕ್ಕೆ ಹೋದರೂ ಗುಣಗಳು ಗುಣಗಳೊಡನೆ ವ್ಯವಹರಿಸುತ್ತವೆಂದೂ ತಾನು ಏನನ್ನೂ ಮಾಡುವವನಲ್ಲವೆಂದೂ ಅವನು ತಿಳಿದಿರುವದರಿಂದ ಜನರು ಅವನು ತಿರಿದು ತಿಂದನೆಂದರೂ ಅವನು ಏನೂ ಮಾಡಿದವನಾಗುವದಿಲ್ಲ. ಅವನಿಗೆ ಸರ್ವವೂ ಬ್ರಹ್ಮಸ್ವರೂಪವಾದ್ದರಿಂದ ಅವನ ಕರ್ಮಗಳು ಫಲದೊಡನೆ ಮೃಗೆಯುತ್ತವೆ.

**ಅ.**—ಅದು ಹೇಗೆ ?

**ಕೃ.**—ಯಾವ ಉಪಕರಣಗಳಿಂದ ಹವಿಸ್ಸನ್ನು ಅಗ್ನಿಯಲ್ಲಿ ಹಾಕುತ್ತಾನೋ ಆ ಉಪಕರಣವನ್ನೂ ಅವನು ಬ್ರಹ್ಮವೆಂದೇ ನೋಡುವನು. ಅವನಿಗೆ ಹವಿಸ್ಸೂ ಬ್ರಹ್ಮವೆ; ಯಾವದರಲ್ಲಿ ಹೋಮ ಮಾಡುತ್ತಾನೋ ಆ ಅಗ್ನಿಯೂ ಬ್ರಹ್ಮವೆ; ಹೋಮಮಾಡುವಿಕೆಯೂ ಬ್ರಹ್ಮವೆ; ಅದರಿಂದ ಅವನು ಪಡೆಯುವ ಫಲವೂ ಬ್ರಹ್ಮವೆ. ಕಪ್ಪೇಚಿಪ್ಪಿನಲ್ಲಿ ಬೆಳ್ಳಿ ಹೇಗಿಲ್ಲವೋ ಬೆಳ್ಳಿಯೆಂದು ಕಾಣುವದು ಹೇಗೆ ಕಪ್ಪೇಚಿಪ್ಪೇನೋ ಹಾಗೆ ಅವನಿಗೆ ಬ್ರಹ್ಮದ ಹೊರತು ಬೇರೆ ವಸ್ತುವೇ ಕಾಣುವದಿಲ್ಲ. ಏಕೆಂದರೆ ಬೇರೆ ವಸ್ತುವೆಂದು ಕಾಣುವದೆಲ್ಲ ಬ್ರಹ್ಮವೆ. ಹೀಗೆ ಇತರರಿಗೆ ಮೇಲುನೋಟಕ್ಕೆ—ಯೆಂದು ಮಾಡಿದರೂ ಅದು ನಿಜವಾಗಿ ಮಾಡಿದ ಹಾಗಲ್ಲ.

## —ಜ್ಞಾನಯಜ್ಞದ ಸ್ತುತಿ—

**ಅ.**—ಈ ಜ್ಞಾನರೂಪವಾದ ಯಜ್ಞವು ಬಹಳ ಹೆಚ್ಚಿನ ಮಟ್ಟಿನದಾಗಿ ಕಾಣುತ್ತದೆ !

**ಕೃ.**—ನಿಜ. ಯಜ್ಞಗಳಲ್ಲೆಲ್ಲ ಅದು ಬಹಳ ಹೆಚ್ಚಿನದು.

**ಅ.**—ಯಜ್ಞಗಳೆಂದು ಬಹುವಚನವನ್ನು ಹೇಳುತ್ತೀಯಲ್ಲ ! ಅವು ಯಾವವು ?

**ಕೃ.**—ಕರ್ಮಿಗಳು ದೇವತೆಗಳನ್ನು ಕುರಿತು ಮಾಡುವ ಯಜ್ಞ ಬೇರೆ. ಎಲ್ಲ ಪ್ರಾಣಿಗಳಲ್ಲಿಯೂ ಅಂತರ್ಯಾಮಿಯಾಗಿರುವ ವಿಶ್ವವ್ಯಾಪಿಯಾದ ಸಚ್ಚಿ

ಮಾನಂದಸ್ವರೂಪವಾದ ಬ್ರಹ್ಮವೆಂಬ ಅಗ್ನಿಯಲ್ಲಿ ತಾನೆ ತನ್ನ ಅಂತರ್ಯಾಮಿಯನ್ನು ಹೋಮಮಾಡಿಬಿಡುವ- ಎಂದರೆ ತನ್ನ ಅಂತರ್ಯಾಮಿಗೆ ಪರಿಮಿತಿಯನ್ನು ಹುಟ್ಟುಗಟ್ಟಿರುವ ಬುದ್ಧಿ ಮೊದಲಾದ ಮುಸುಕುಗಳನ್ನು ಹಾರಹೊಡೆದು ತನ್ನನ್ನು ಯಾವ ಮುಸುಕೂ ಇಲ್ಲದ ಅಖಂಡವಾದ ಶುದ್ಧಬ್ರಹ್ಮವೆಂದು ತಿಳಿಯುವ- ಯಜ್ಞ ಬೇರೆ. ಇಂದ್ರಿಯಗಳನ್ನು ಜಿಗಿಹಿಡಿಯುವದೆಂಬ ಅಗ್ನಿಯಲ್ಲಿ ಇಂದ್ರಿಯಗಳನ್ನು ಹೋಮಮಾಡುವ- ಎಂದರೆ ಇಂದ್ರಿಯಗಳನ್ನು ಜಿಗಿಹಿಡಿಯುವ- ಯಜ್ಞ ಬೇರೆ. ಇಂದ್ರಿಯಗಳೆಂಬ ಅಗ್ನಿಗಳಲ್ಲಿ ವಿಷಯಗಳನ್ನು ಹೋಮಮಾಡುವ- ಎಂದರೆ ಒಳ್ಳೆಯದನ್ನು ನೋಡುವದು, ಒಳ್ಳೆಯದನ್ನು ಕೇಳುವದು- ಮೊದಲಾದ ಉಚಿತವಾದ ವಿಷಯಗಳನ್ನು ಗ್ರಹಣಮಾಡುವ- ಯಜ್ಞ ಬೇರೆ. ನೋಡುವದೇ ಮೊದಲಾದ ಇಂದ್ರಿಯಗಳ ಕೆಲಸಗಳನ್ನೂ ಮುದುರಿಕೊಳ್ಳುವದೇ ಮೊದಲಾದ ಶರೀರದಲ್ಲಿರುವ ಪ್ರಾಣವಾಯುವಿನ ಕೆಲಸಗಳನ್ನೂ ಆತ್ಮಸ್ವರೂಪದ ಕಡೆಗೆ ಒಳಮುಖವಾಗಿ ತಿರುಗಿರುವ ಮನಸ್ಸೆಂಬ ಅಗ್ನಿಯಲ್ಲಿ ಹೋಮಮಾಡುವ- ಎಂದರೆ ಇಂದ್ರಿಯಕರ್ಮಗಳನ್ನೂ ಪ್ರಾಣಕರ್ಮಗಳನ್ನೂ ಜಿಗಿಹಿಡಿದು ಆತ್ಮನನ್ನೆ ಚಿಂತಿಸುವ- ಯಜ್ಞ ಬೇರೆ. ತೀರ್ಥಕ್ಷೇತ್ರಗಳಲ್ಲಿ ಹಣವನ್ನು ವೆಚ್ಚಮಾಡುವದನ್ನೆ ಯಜ್ಞವೆಂದು ತಿಳಿಯುವ ಯಜ್ಞ ಬೇರೆ. ಉಪವಾಸ ಮೊದಲಾದ ದೇಹದಂಡನೆಯ ತಪಸ್ಸಿನ ರೂಪವಾದ ಯಜ್ಞ ಬೇರೆ. ಪ್ರಾಣಾಯಾಮ ಮೊದಲಾದವುಗಳ ರೂಪವಾದ ಯೋಗಯಜ್ಞ ಬೇರೆ. ವೇದಾಧ್ಯಯನರೂಪವಾದ ಯಜ್ಞ ಬೇರೆ. ಶಾಸ್ತ್ರಾರ್ಥಗಳನ್ನು ತಿಳಿಯುವ ರೂಪವಾದ ಯಜ್ಞ ಬೇರೆ. ಬಹು ಕಟ್ಟುನಿಟ್ಟಾದ ನಿಯಮಗಳಿಂದ ಮಾಡುವ ವ್ರತಗಳ ರೂಪವಾದ ಯಜ್ಞ ಬೇರೆ. ಅಪಾನದಲ್ಲಿ ಪ್ರಾಣವನ್ನು ಹೋಮಮಾಡುವ- ಎಂದರೆ ಚೆನ್ನಾಗಿ ಉಸಿರೆಳೆದುಕೊಂಡು ಒಳಗೆ ಹಾಗೆಯೇ ನಿಲ್ಲಿಸುವ ರೂಪವಾದ-ಯಜ್ಞ ಬೇರೆ. ಪ್ರಾಣದಲ್ಲಿ ಅಪಾನವನ್ನು ಹೋಮಮಾಡುವ- ಎಂದರೆ ಚೆನ್ನಾಗಿ ಉಸಿರುಬಿಟ್ಟು ಹೊರಗೆ ಹಾಗೆಯೇ ನಿಲ್ಲಿಸುವ ರೂಪವಾದ ಯಜ್ಞ ಬೇರೆ. ಉಸಿರೆಳೆದುಕೊಳ್ಳದೆ ಮತ್ತು ಬಿಡದೆ ಹಾಗೆಯೇ ತಡೆದು ನಿಲ್ಲಿಸುವ ರೂಪವಾದ ಯಜ್ಞ ಬೇರೆ. ಊಟವನ್ನು ಮಿತಕ್ಕೆ ತಂದುಕೊಂಡು ವಾಯುಭೇದಗಳನ್ನು ವಾಯುಭೇದಗಳಲ್ಲಿ

ಹೋಮಮಾಡುವ- ಎಂದರೆ ಒಂದೊಂದು ವಾಯುಭೇದವನ್ನು ಗೆಲ್ಲುವ-ಯಜ್ಞ ಬೇರೆ. ಇವುಗಳನ್ನು ಮಾಡುವವರೆಲ್ಲರೂ ಯಜ್ಞಸ್ವರೂಪವನ್ನು ತಿಳಿದವರು ಮತ್ತು ಪಾಪವನ್ನು ಕಳೆದುಕೊಂಡವರು. ಈ ಯಜ್ಞಗಳನ್ನು ಮಾಡಿದ ಮೇಲೆ ಉಣ್ಣುವ ಅವರ ಊಟವೂ ಅಮೃತವಾಗುವದು. ಕೊನೆಗೆ ಅವರು ಮೋಕ್ಷವನ್ನು ಪಡೆಯುವರು. ಈ ಯಜ್ಞಗಳಲ್ಲಿ ಯಾವದೊಂದನ್ನೂ ಮಾಡದವರಿಗೆ ಈ ಲೋಕದ ಸುಖವು ಕೂಡ ಇಲ್ಲ. ಇನ್ನು ಅವರಿಗೆ ಪರಲೋಕದ ಮಾತೆಲ್ಲಿಯದು ! ವೇದದಲ್ಲಿ ಇಂಥ ಯಜ್ಞಗಳು ಬಹಳವಾಗಿವೆ. ಇವುಗಳೆಲ್ಲ ದೇಹದಿಂದಲೋ ಮಾತಿನಿಂದಲೋ ಮನಸ್ಸಿನಿಂದಲೋ ನಡೆಯತಕ್ಕವುಗಳೇ ಹೊರತು ಆತ್ಮನಿಂದ ನಡೆಯತಕ್ಕವುಗಳಲ್ಲ. ಆತ್ಮನು ಏನನ್ನೂ ನಡೆಸುವವನಲ್ಲ. ಇದನ್ನು ತಿಳಿದರೆ ಎಲ್ಲ ಅಮಂಗಲಗಳೂ ಹಿಮ್ಮೆಟ್ಟುವವು. ಉಪಕರಣಗಳ ಉಪಯೋಗದಿಂದ ಮಾಡುವ ಯಜ್ಞಗಳಿಗಿಂತ ಜ್ಞಾನಯೋಗವು ಹೆಚ್ಚಿನದು. ಏಕೆಂದರೆ ಉಪಕರಣಗಳಿಂದಾಗುವ ಈ ಯಜ್ಞವು ಏನಾದರೊಂದು ಸಣ್ಣ ಲೌಕಿಕಫಲವನ್ನು ಕೊಡುವಂಥದ್ದು. ಜ್ಞಾನಯಜ್ಞವು ಅಂಥದ್ದಲ್ಲ. ಜ್ಞಾನಯಜ್ಞದ ಫಲವು ಉಪಕರಣಗಳಿಂದಾಗುವ ಯಜ್ಞದ ಫಲಗಳನ್ನೆಲ್ಲ ತನ್ನ ಹೊಟ್ಟೆಯೊಂದು ಪಕ್ಕೆಯ ಮೂಲೆಯಲ್ಲಿ ಅಡಗಿಸಿಕೊಂಡಿರುವದು.

**ಅ.**—ಇಂಥ ಜ್ಞಾನವನ್ನು ಪಡೆಯುವದು ಹೇಗೆ ?

**ಕೃ.**—ಸದ್ಗುರುಗಳಿಗೆ ಶರಣುಹೋಗಿ ಅಡ್ಡಬಿದ್ದು ತನಗಾಗಿರುವ ದುಃಖದ ಮೂಲವನ್ನೂ ಅದರ ಪರಿಹಾರವನ್ನೂ ತಿಳಿಯುವಿಚ್ಛೆಯಿಂದ ಅವರನ್ನು ಸೇವೆಮಾಡಬೇಕು. ಆತ್ಮಸ್ವರೂಪವನ್ನು ಕಣ್ಣಿಗೆ ಕಟ್ಟಿದಂತೆ ಕಂಡಿರುವ ಆ ಜ್ಞಾನಿಗಳು ಇವನ ಮೇಲೆ ಮರುಕ ಹುಟ್ಟಿದಾಗ ಅದರ ವಿಷಯವನ್ನು ತಿಳಿಸುವರು. ಅವರು ಹೇಳಿದ್ದನ್ನು ತಿಳಿದುಕೊಂಡರೆ ಆಗ ನಿನಗೆ ಕಾಣುವ ಜಗತ್ತೆಲ್ಲ ನಿನ್ನಲ್ಲಿಯೇ ಕಲ್ಪಿತವಾದದ್ದೆಂದೂ ಅಥವಾ ನಿನಗೂ ಈಶ್ವರನಿಗೂ ಭೇದವಿಲ್ಲವಾದ್ದರಿಂದ ಈಶ್ವರನಲ್ಲಿ ಕಲ್ಪಿತವಾದದ್ದೆಂದೂ ನೀನು ಕಾಣುತ್ತಿ. ಇಷ್ಟಾದರೆ ಆಮೇಲೆ ನಿನಗೆ ತಪ್ಪುತಿಳಿವಿನ ಭಯವಿಲ್ಲ. ನೀನು ಬಹು ಹೆಚ್ಚಿನ ಪಾಪಪುಣ್ಯಗಳನ್ನು ಮಾಡಿದವನಾದರೂ, ಧಗಧಗಿಸುವ ಬೆಂಕಿಯು ಕಟ್ಟಿಗೆಯನ್ನು ಸುಟ್ಟು ಬೂದಿಮಾಡು

ನಂತೆ, ಜ್ಞಾನವು ಅವುಗಳನ್ನೆಲ್ಲ ಸುಟ್ಟು ಬೂದಿಮಾಡುವದು- ಎಂದರೆ ಜನ್ಮಗಳನ್ನು ಕೊಡುವ ಕರ್ಮಶಕ್ತಿಯನ್ನು ಹುರಿದುಹಾಕಿ ಅದು ಮತ್ತೆ ಮೊಳೆಯದಂತೆ ಮಾಡುತ್ತದೆ. ಈಗಿನ ಜನ್ಮಕ್ಕೆ ಗಂಟುಬಿದ್ದಿರುವ ಕರ್ಮಗಳನ್ನು ಅನುಭವಿಸಿದ ಮೇಲೆ ಮುಕ್ತಿ ನಿನಗೆ ತಪ್ಪಿಲ್ಲ. ಆದ್ದರಿಂದ ಮನಸ್ಸನ್ನು ಶುದ್ಧಮಾಡುವ ವಿಷಯದಲ್ಲಿ ಜ್ಞಾನಕ್ಕೆ ಸಮಾನವಾದದ್ದು ಬೇರೆ ಯಾವದೂ ಇಲ್ಲ. ಆ ಜ್ಞಾನವು ಚೆನ್ನಾಗಿ ಕರ್ಮಯೋಗವನ್ನು ಮಾಡಿ ಚಿತ್ತಶುದ್ಧಿಯನ್ನು ಪಡೆದವನಿಗೆ ಎಷ್ಟೋ ಕಾಲದ ಮೇಲೆ ದೊರೆಯುವದು. ಗುರುಗಳಿಗೆ ಅಡ್ಡಬೀಳುವದರಲ್ಲಿ ಬರೀ ಬೂಟಾಟಿಕೆ ಇದ್ದರೂ ಇರಬಹುದಾದ್ದರಿಂದ ಜ್ಞಾನದ ಸಾಧನಗಳಲ್ಲಿ ಶ್ರದ್ಧೆಯೂ ಗುರುಗಳೇ ತನ್ನ ಸರ್ವಸ್ವವೆಂಬ ಭಾವನೆಯೂ ಇಂದ್ರಿಯನಿಗ್ರಹವೂ ಇದ್ದರೆ ಜ್ಞಾನವು ದೊರೆತೇ ದೊರೆಯುವದು. ಆ ಜ್ಞಾನವಾದ ಮೇಲೆ ಮೋಕ್ಷಕ್ಕೆ ತಡವಿಲ್ಲ. ಆದ್ದರಿಂದ ಈ ವಿಷಯದಲ್ಲಿ ಸಂಶಯಗೊಳ್ಳದೆ ಜ್ಞಾನಸಾಧನವಾದ ಕರ್ಮಯೋಗದಲ್ಲಿ ತೊಡಗಿ ಈಗ ಯುದ್ಧವನ್ನು ಮಾಡು.

**ಅ.**—ನೀನು ಕರ್ಮದ ಮತ್ತು ಅಕರ್ಮದ ಒಗಟನ್ನು ಬಿಡಿಸಿ ಹೇಳುವ ಪ್ರಸಂಗದಲ್ಲಿ ಕರ್ಮಗಳನ್ನೆಲ್ಲ ಬಿಟ್ಟಿರುವ ನಡೆವಳಿಕೆಯನ್ನು ಹೊಗಳಿದುದನ್ನು ನೋಡಿದರೆ ಜ್ಞಾನಿಗಳು ಮಾತ್ರವೇ ಅಲ್ಲದೆ ತಿಳಿವಳಿಕೆ ಇಲ್ಲದ ನನ್ನಂಥವರೂ ಕರ್ಮಗಳನ್ನು ಬಿಡಬಹುದೆಂದು ತೋರುತ್ತದೆ. ಹೀಗಿರುವಾಗ ನನಗೆ ಕರ್ಮವನ್ನು ಮಾಡೆಂದು ಹೇಳುತ್ತೀಯಲ್ಲ! ಕರ್ಮಗಳನ್ನು ಮಾಡುವದು, ಬಿಡುವದು- ಈ ಎರಡರಲ್ಲಿ ನನಗೆ ಯಾವದು ಮೇಲು? ಗೊತ್ತುಮಾಡಿ ಹೇಳು.

## —ನಿಜವಾದ ಸಂನ್ಯಾಸ—

**ಕೃ.**—ಎರಡೂ ಜ್ಞಾನವನ್ನುಂಟುಮಾಡುವದರ ಮೂಲಕ ಮೋಕ್ಷವನ್ನು ಕೊಡಬಲ್ಲವು. ಆದರೂ ಅವುಗಳಲ್ಲಿ ಸಂನ್ಯಾಸ ಕರ್ಮವನ್ನು ಬಿಡುವದಕ್ಕಿಂತ ಅದನ್ನು ಮಾಡುವದು ಮೇಲು.

**ಅ.**—ಅದೇಕೆ?

**ಕೃ.**—ಸುಖವು ಬಂತೆಂದು ಹಿಗ್ಗದೆ, ದುಃಖವು ಬಂತೆಂದು ತಗ್ಗದೆ,

ಫಲವನ್ನು ಬಯಸದೆ ಸಮತ್ವಬುದ್ಧಿಯಿಂದ ಮಾಡುವ ಕರ್ಮಯೋಗಿಯು ಪೂರ್ವಾಗಲೂ ಸಂನ್ಯಾಸಿಯೆಂದೇ ತಿಳಿಯಬೇಕು. ಎಂದರೆ ಕರ್ಮವನ್ನು ಬಿಟ್ಟಿರುವಂತೆಯೆ.

**ಅ.**—ಸಂನ್ಯಾಸವೂ ಕರ್ಮಯೋಗವೂ ಒಂದಕ್ಕೊಂದು ವಿರುದ್ಧ. ಇವೆರಡೂ ಒಬ್ಬನಲ್ಲಿ ಏಕಕಾಲದಲ್ಲಿರುವದಿಲ್ಲ. ಸಂನ್ಯಾಸಿಯೇ ಬೇರೆ; ಕರ್ಮಯೋಗಿಯೇ ಬೇರೆ. ಆದ್ದರಿಂದ ಅವರಿಬ್ಬರಿಗೂ ಫಲಗಳು ಬೇರೆ ಬೇರೆ ಆಗಬೇಕಾದದ್ದು ಉಚಿತ. ಹೀಗಿರುವಾಗ ಎರಡೂ ಮೋಕ್ಷವನ್ನು ಕೊಡ ಬಲ್ಲವೆಂದು ಎರಡಕ್ಕೂ ಒಂದೇ ಫಲವನ್ನು ಹೇಳುತ್ತೀಯಲ್ಲ!

**ಕೃ.**—ಜ್ಞಾನಯೋಗಕ್ಕೂ ಕರ್ಮಯೋಗಕ್ಕೂ ಬೇರೆ ಬೇರೆ ಫಲ ವೆನ್ನುವದು ತಿಳಿದವರು ಹೇಳುವ ಮಾತಲ್ಲ. ಅವುಗಳಲ್ಲಿ ಯಾವ ಒಂದನ್ನು ಚೆನ್ನಾಗಿ ನಡೆಸಿದರೂ ಅದರಿಂದ ಎರಡರ ಫಲವೂ ಆದ ಮೋಕ್ಷವು ದೊರೆ ಯುವದು.

**ಅ.**—ಸಂನ್ಯಾಸದ ಮತ್ತು ಕರ್ಮಯೋಗದ ಫಲದ ವಿಷಯವನ್ನು ನಾನು ಕೇಳಿದರೆ ನೀನು ಜ್ಞಾನಯೋಗದ ಮತ್ತು ಕರ್ಮಯೋಗದ ಫಲವು ಒಂದೇ ಎಂದು ಅಸಂಬದ್ಧವಾಗಿ ಹೇಳುತ್ತೀಯಲ್ಲ!

**ಕೃ.**—ಇಲ್ಲಿ ಅಸಂಬದ್ಧವೇನೂ ಇಲ್ಲ. ನೀನು ಕರ್ಮಗಳನ್ನು ಬಿಡುವ ಮಾತ್ರದ ಅರ್ಥವನ್ನಿಟ್ಟುಕೊಂಡು ಸಂನ್ಯಾಸವೆಂಬ ಮಾತನ್ನುಪಯೋಗಿ ಸಿದೆ. ನಾನು ಆ ಅರ್ಥವನ್ನೂ ಇಟ್ಟುಕೊಂಡು ಅವರ ಜೊತೆಗೆ ಆತ್ಮನು ಏನನ್ನೂ ಮಾಡುವವನಲ್ಲವೆಂಬ ಜ್ಞಾನವನ್ನೂ ಸೇರಿಸಿ ಜ್ಞಾನಯೋಗ ವೆಂದು ಕರೆದಿದ್ದೇನೆ. ಜ್ಞಾನಪೂರ್ವಕವಾದ ಸಂನ್ಯಾಸವೇ ನಿಜವಾದ ಸಂನ್ಯಾಸ. ಅಗ್ನಿಹೋತ್ರ, ತಪಸ್ಸು, ದಾನ- ಮೊದಲಾದ ವಿಹಿತಕರ್ಮ ಗಳನ್ನು ಸುಮ್ಮನೆ ಬಿಡುವ ಮಾತ್ರವು ಸಂನ್ಯಾಸವಲ್ಲ. ಇದಲ್ಲದೆ ಸುಮ್ಮನೆ ಕರ್ಮಗಳನ್ನು ಬಿಡುವದು ಸಾಧ್ಯವೂ ಅಲ್ಲವೆಂದೂ ಉಚಿತವೂ ಅಲ್ಲವೆಂದೂ ಹಿಂದೆ ಹೇಳಿದ್ದೇನೆ. ಜ್ಞಾನಸಹಿತವಾಗಿ ಬಿಡುವದೆಂಬರ್ಥವು ಮರೆಯಾಗದೆ ಇರುವದಕ್ಕಾಗಿ ಬೇರೆ ಶಬ್ದವನ್ನುಪಯೋಗಿಸಿದ್ದೇನೆ.

**ಅ.**—ಯಾವ ಒಂದನ್ನು ಚೆನ್ನಾಗಿ ನಡೆಸಿದರೂ ಅದರಿಂದ ಎರಡರ ಫಲವೂ ಆದ ಮೋಕ್ಷವು ಹೇಗೆ ದೊರೆಯುತ್ತದೆ?

**ಕೃ.**—ಜ್ಞಾನಿಗಳಾದ ಸಂನ್ಯಾಸಿಗಳಂತು ಮೋಕ್ಷವನ್ನು ಪಡೆಯುತ್ತಾರಷ್ಟೆ. ಜ್ಞಾನಕ್ಕೆ ಸಾಧನವಾಗಿ ತನ್ನ ಕರ್ಮಗಳಿಗೆ ಫಲವನ್ನು ಬಯಸದೆ ಈಶ್ವರಪ್ರೀತಿಗಾಗಿ ಮಾಡುವ ಕರ್ಮಯೋಗದಿಂದ ಜ್ಞಾನಪೂರ್ವಕವಾದ ಸಂನ್ಯಾಸದ್ವಾರವಾಗಿ ಮೋಕ್ಷವಾಗುತ್ತದೆ. ಹೀಗೆ ಎರಡಕ್ಕೂ ಒಂದೇ ಫಲವಾದ್ದರಿಂದ ಇವೆರಡನ್ನೂ ಒಂದಾಗಿ ತಿಳಿಯುವದೇ ಸರಿಯಾದ ತಿಳುವಳಿಕೆ.

**ಅ.**—ಹಾಗಾದರೆ ಕರ್ಮಯೋಗಕ್ಕಿಂತಲೂ ಸಂನ್ಯಾಸವೇ ಮೇಲಾಯಿತು. ನೀನು ಕರ್ಮಯೋಗವೇ ಮೇಲೆನ್ನುತ್ತೀಯಲ್ಲ!

**ಕೃ.**—ನೀನು ಸುಮ್ಮನೆ ಕರ್ಮಗಳನ್ನು ಬಿಡುವದನ್ನು ಮಾಡುವದನ್ನು ಕುರಿತು ಕೇಳಿದೆ. ಅದಕ್ಕೆ ಉತ್ತರವಾಗಿ ಜ್ಞಾನವಿಲ್ಲದೆ ಕರ್ಮಗಳನ್ನು ಸುಮ್ಮನೆ ಬಿಡುವದಕ್ಕಿಂತಲೂ ಮಾಡುವದು ಮೇಲೆಂದೆನು. ಜ್ಞಾನಪೂರ್ವಕವಾಗಿ ಕರ್ಮಗಳನ್ನು ಬಿಡುವದು ನಿಜವಾದ ಯೋಗ. ಅದಕ್ಕೆ ಸಾಧನವಾಗಿ ವೇದೋಕ್ತಕರ್ಮಗಳನ್ನು ಫಲಾಪೇಕ್ಷೆ ಇಲ್ಲದೆ ಮಾಡುವದು ಜ್ಞಾನಕ್ಕೆ ಸಾಧನವಾದ್ದರಿಂದ ಮಾತ್ರ ಅದನ್ನು ಉಪಚಾರದಿಂದ ಯೋಗವೆಂದೂ ಸಂನ್ಯಾಸವೆಂದೂ ಹೇಳಲಾಗುವದು.

**ಅ.**—ಕರ್ಮಯೋಗವು ಜ್ಞಾನಕ್ಕೆ ಹೇಗೆ ಸಾಧನ?

**ಕೃ.**—ಕರ್ಮಯೋಗವಿಲ್ಲದೆ ಜ್ಞಾನಪೂರ್ವಕವಾದ ಸಂನ್ಯಾಸವು ಕೈಗೂಡುವದಿಲ್ಲ. ಕರ್ಮಯೋಗದಿಂದ ಜ್ಞಾನಪೂರ್ವಕವಾದ ಸಂನ್ಯಾಸದ ಸ್ಥಿತಿಯನ್ನು ಬೇಗ ಪಡೆಯಬಹುದು. ಆದ್ದರಿಂದ ಕರ್ಮಯೋಗವು ಜ್ಞಾನಕ್ಕೆ ಸಾಧನ.

**ಅ.**—ಜ್ಞಾನಿಗೂ ಮತ್ತು ಕರ್ಮಯೋಗಿಗೂ ಕರ್ಮದ ಗೊಲೆ ಬೀಳದಿರುವದು ಹೇಗೆ?

**ಕೃ.**—ಜ್ಞಾನಿಯು ಕರ್ಮಗಳೆಲ್ಲ ದೇಹೇಂದ್ರಿಯಗಳಿಂದ ನಡೆಯುವವುಗಳೆಂದೂ ತಾನು ಏನನ್ನೂ ಮಾಡುವವನಲ್ಲವೆಂದೂ ತಿಳಿದು ಮಾಡುತ್ತಿರುವನು. ಹೀಗೆ ಹೊರಗಣವರ ದೃಷ್ಟಿಯಿಂದ ಅವನು ಏನನ್ನಾದರೂ ಮಾಡಿದರೂ ತನ್ನ ದೃಷ್ಟಿಯಿಂದ ಮಾಡಿದವನೇ ಅಲ್ಲವಾದ್ದರಿಂದ ಕರ್ಮದ ಗೊಲೆ ಅವನ ಕೊರಳಿಗೆ ತೂರಲಾರದು. ಕರ್ಮಯೋಗಿಯು ತಾನು ಈಶ್ವರನ

ಆಳಾಗಿ ದುಡಿಯುವವನೆಂದು ಮಾಡುವದರಿಂದ ಕಮಲದ ಎಲೆಗೆ ನೀರು ಅಂಟದಿರುವಂತೆ ಅವನಿಗೆ ಕರ್ಮವು ಅಂಟುವದಿಲ್ಲ.

**ಅ.**—ಮಾಡಿದ ಕರ್ಮವು ಏನನ್ನಾದರೂ ಫಲವನ್ನು ಕೊಡಬೇಕಲ್ಲ !

**ಕೃ.**--ಕರ್ಮವು ಏನನ್ನಾದರೂ ಬಯಸಿದವರಿಗೆ ಬಯಸಿದ ಫಲವನ್ನು ಕೊಡುತ್ತದೆ. ಏನನ್ನೂ ಬಯಸದಿದ್ದರೆ ಅವನ ಮನಸ್ಸಿನ ಹೊಲಸನ್ನೆಲ್ಲ ತೊಳೆದು ಅವನನ್ನು ಜ್ಞಾನಕ್ಕೆ ತಕ್ಕವನನ್ನಾಗಿ ಮಾಡುತ್ತದೆ. ಅರ್ಜುನ, ನೀನು ಈ ಸ್ಥಿತಿಯನ್ನು ಪಡೆಯುವದಕ್ಕಾಗಿ ಕರ್ಮವನ್ನು ಮಾಡುವ ಮೆಟ್ಟಿಲಿನಲ್ಲಿದ್ದಿ. ಆದ್ದರಿಂದ ಯೋಗವನ್ನು ಹಿಡಿ. ಅದರಿಂದ ಚಿತ್ತಶುದ್ಧಿಯಾಗಿ ಜ್ಞಾನವು ದೊರೆತು ನಾನು ಏನನ್ನೂ ಮಾಡುವವನಲ್ಲವೆಂಬ ತಿಳಿವಳಿಕೆಯಿಂದ ಕರ್ಮಗಳು ದೂರವಾಗಿ ಮೋಕ್ಷವು ಕೈಸೇರುವದು.

**ಅ.**----ಬಯಕೆಯಿಂದಾಗುವ ಹಾನಿ ಏನು ?

**ಕೃ.**----ಬಯಸಿದ ಬೇರೆ ಬೇರೆ ಫಲಗಳನ್ನು ಉಂಡುಂಡು ತೀರಿಸುವದಕ್ಕಾಗಿ ಎಷ್ಟೋ ಸಲ ಹುಟ್ಟಿ ಸಾಯುತ್ತಿರಬೇಕಾಗುತ್ತದೆ.

**ಅ.**—ಆತ್ಮನು ಮಾಡುವವನಲ್ಲದೆ ಹೋದರೆ ದೇಹ ಮೊದಲಾದವುಗಳಿಂದ ಮಾಡಿಸುವವನಾದರೂ ಆಗುವನಷ್ಟೆ ?

**ಕೃ.**—ಮಾಡಿಸುವವನೂ ಅಲ್ಲ. ಅವನು ಮನಸ್ಸಿನಲ್ಲಿ ಎಲ್ಲ ಸಂಬಂಧವನ್ನೂ ತೊರೆದು ಸುಖವಾಗಿ ದೇಹದಲ್ಲಿರುವನು.

**ಅ.**--ಎಲ್ಲರೂ ದೇಹದಲ್ಲಿಯೇ ಇರುವರು. ಅವನು ದೇಹದಲ್ಲಿರುವನೆಂಬುದರಲ್ಲಿ ಹೆಚ್ಚುಗಾರಿಕೆಯೇನು ?

**ಕೃ.**--ಉಳಿದವರು ದೇಹ ಮೊದಲಾದವುಗಳನ್ನೂ ತಾವೆಂದೇ ತಿಳಿದುಕೊಂಡು ತಾವು ಮನೆಯಲ್ಲಿಯೋ ಮಠದಲ್ಲಿಯೋ ಇರುವೆವೆನ್ನುವರು. ಜ್ಞಾನಿ ಹಾಗಲ್ಲ. ತನ್ನ ಸ್ವರೂಪವು ದೇಹ ಮೊದಲಾದವುಗಳಿಂದ ಬೇರೆಯಾದ ಚೈತನ್ಯವೆಂದು ಮನಗಂಡು ತಾನು ದೇಹದಲ್ಲಿರುವೆನೆಂದು ತಿಳಿದಿರುವನು. ಇದೇ ಅವನ ಹೆಚ್ಚುಗಾರಿಕೆ.

**ಅ.**—ಆತ್ಮನು ಮಾಡುವವನೂ ಮಾಡಿಸುವವನೂ ಅಲ್ಲವಾದರೆ ಜಗತ್ತಿನಲ್ಲಿ ಅನೇಕ ವಸ್ತುಗಳನ್ನು ಮಾಡಿರುವವನೂ ಅನೇಕರಿಂದ ಅನೇಕ

ಕರ್ಮಗಳನ್ನು ಮಾಡಿಸುವವನೂ ಅವರವರ ಕರ್ಮಗಳಿಗೆ ಆಯಾ ಫಲಗಳನ್ನು ಗಂಟುಹಾಕುವವನೂ ಯಾರು ?

ಕೃ.—ಅದೆಲ್ಲ ಮಾಯಾಶಕ್ತಿಯ ಕೆಲಸ. ಆದರ ಬಲೆಯಲ್ಲಿ ಬಿದ್ದಿರುವ ಜನರು ತಾವು ಈಶ್ವರನ ಮೇಲೆ ಭಕ್ತಿಯನ್ನು ಮಾಡಿದರೆ ತಮ್ಮ ಪಾಪವನ್ನೂ ಪುಣ್ಯವನ್ನೂ ಈಶ್ವರನು ತೆಗೆದುಕೊಳ್ಳುವನೆಂದು ತಪ್ಪು ತಿಳಿದು ಕರ್ಮದಲ್ಲಿ ತೊಡಗುವರು.

ಅ.—ಅದಕ್ಕೇನು ಪರಿಹಾರ ?

ಕೃ.—ಜ್ಞಾನದಿಂದ ಅವರು ಆ ಮಾಯೆಯ ಬಲೆಯನ್ನು ಹರಿದೊಗೆದರೆ ಬ್ರಹ್ಮಸ್ವರೂಪವು ಕಣ್ಣಿಗೆ ಕಟ್ಟಿದಂತಾಗುವದು. ಅದರಲ್ಲಿಯೇ ತನ್ಮಯರಾಗಿ ಅವರು ತಮ್ಮ ಪಾಪಗಳನ್ನೆಲ್ಲ ಕಳೆದುಕೊಂಡು ಮತ್ತೆ ಹುಟ್ಟುಸಾವುಗಳಿಲ್ಲದಂಥ ಮೋಕ್ಷವನ್ನು ಹೊಂದುತ್ತಾರೆ.

ಅ.—ಮಾಯೆಯ ಬಲೆಯನ್ನು ಹರಿದ ಮೇಲೆ ಅವರು ಆ ತತ್ತ್ವವನ್ನು ನೋಡುವ ಬಗೆ ಹೇಗೆ ?

## —ಆತ್ಮದರ್ಶನದ ರೀತಿ—

ಕೃ.—ವಿದ್ಯೆ, ವಿನಯ- ಮೊದಲಾದ ಉತ್ತಮಸಂಸ್ಕಾರಗಳುಳ್ಳ ಸಾತ್ತ್ವಿಕನಾದ ಬ್ರಾಹ್ಮಣನಲ್ಲಿಯೂ ಸಂಸ್ಕಾರಗಳಿಲ್ಲದೆ ರಜೋಗುಣದಿಂದಿರುವ ಆಕಳಲ್ಲಿಯೂ ಬರೀ ತಮೋಗುಣವುಳ್ಳ ಆನೆ, ನಾಯಿ, ಹೊಲೆಯ- ಮೊದಲಾದವರಲ್ಲಿಯೂ ಬ್ರಹ್ಮವು ಆತ್ಮವಾಗಿ ಆ ಯಾವ ಗುಣಗಳ ಸೋಂಕೂ ಇಲ್ಲದೆ ಏಕರೂಪವಾಗಿರುವದೆಂದು ಅವರು ನೋಡುವರು.

ಅ.—ಉತ್ತಮರನ್ನೂ ಅಧಮರನ್ನೂ ಒಂದೇ ಆಗಿ ನೋಡುವದು ತಪ್ಪಲ್ಲವೆ ?

ಕೃ.—ಯಾರು ಒಬ್ಬ ಬ್ರಹ್ಮನೆ ಎಲ್ಲ ಪ್ರಾಣಿಗಳಲ್ಲಿಯೂ ಇರುವನೆಂದು ತಮ್ಮ ಮನಸ್ಸನ್ನು ಕದಲಿಸದೆ ಇರುತ್ತಾರೊ ಅವರು ಬದುಕಿರುವಾಗಲೆ ಹುಟ್ಟುಸಾವುಗಳನ್ನು ಗೆದ್ದಂತೆ ಆಯಿತು. ಹೊಲಸುಳ್ಳ ಹೊಲೆಯ ಮೊದಲಾದವರ ಆತ್ಮವು ಕೂಡ ಹೊಲಸೆಂದು ಮೂಢರು ತಿಳಿದರೂ

ಮೊಳಸು ಗುಣಮಯವಾದ ದೇಹಕ್ಕೂ ಮನಸ್ಸಿಗೂ ಸಂಬಂಧಪಟ್ಟ ದ್ದೆಂದೂ ಆತ್ಮವು ಗುಣಗಳ ಸೋಂಕಿಲ್ಲದ್ದೆಂದೂ ಜ್ಞಾನಿಗಳಿಗೆ ಗೊತ್ತು.

**ಅ.**—ಆತ್ಮನು ದೇಹ ಮೊದಲಾದವುಗಳಿಗಿಂತ ಬೇರೆಯೆಂದು ನೋಡು ವವನು ಹೇಗೆ ವ್ಯವಹರಿಸುವನು ?

**ಕೃ.**—ಅವನು ತನಗೊಂದು ಹಿತವಾದದ್ದು ದೊರೆಯಿತೆಂದು ಹಿಗ್ಗುವ ದಿಲ್ಲ; ಅಹಿತವಾದದ್ದು ಬಂದು ಗಂಟುಬಿತ್ತೆಂದು ತಗ್ಗುವದಿಲ್ಲ. ಆ ಹಿಗ್ಗು ತಗ್ಗು ದೇಹವನ್ನು ತಾನೆಂದು ತಿಳಿಯುವವರಿಗೆ ಮಾತ್ರ.

**ಅ.**—ಹಾಗಾದರೆ ಅವನ ಭಾಗಕ್ಕೆ ಸುಖವೆಂಬುದೇ ಇಲ್ಲದಂತಾಗು ತ್ತದಲ್ಲ !

**ಕೃ.**—ಹಾಗೆ ತಿಳಿಯಬೇಡ. ಹೊರಗಣ ವಿಷಯಗಳ ಕಡೆಗೆ ಮನ ಸ್ಸನ್ನು ಹರಿಯಬಿಡದೆ ತನ್ನೊಳಗೆ ತಾನು ಬ್ರಹ್ಮದಲ್ಲಿ ತನ್ಮಯನಾಗಿರು ವವನಿಗೆ ಎಂದೆಂದಿಗೂ ಹೋಗದೆ ಇರುವ ಸುಖವಾಗುತ್ತದೆ. ಅರ್ಜುನ, ಹೊರಗಣ ವಿಷಯಗಳ ಅನುಭವವೆಂಬುದೆಲ್ಲ ತೀರಿ ಹೋಗತಕ್ಕದ್ದಾಗಿ ಷ್ಟ ರಿಂದ ದುಃಖಕ್ಕೆ ಕಾರಣ. ಸಂಸಾರದಲ್ಲಿ ಸುಖದ ಗಂಧವು ಕೂಡ ಇಲ್ಲ. ಆದ್ದರಿಂದ ವಿಷಯಗಳೆಂಬ ಬಿಸಿಲಗುದುರೆಯಿಂದ ಇಂದ್ರಿಯಗಳನ್ನು ಹಿಮ್ಮೆ ಟ್ಟಿಸಬೇಕು. ವಿಷಯಸುಖದ ಮೇಲಿನ ಪ್ರೀತಿಯು ಅತ್ಯಂತಮೂಢ ವಾದ ಪಶುಪಕ್ಷಿಗಳಿಗೆ ಮಾತ್ರ ಸಲ್ಲುವದು. ಸಾಯುವವರೆಗೂ ಬಯ ಕೆಯ ಮತ್ತು ಸಿಟ್ಟಿನ ಹಾವಳಿಯನ್ನು ತಡೆಯಬೇಕು. ಬಯಕೆ ಹುಟ್ಟಿ ದ್ದರ ಮೇಲೆ ಕೂದಲೇಳುವದು, ಕಣ್ಣರಳುವದು– ಮೊದಲಾದವುಗಳಾಗ ಬಾರದು. ಸಿಟ್ಟು ಬಂದು ಮೈನಡುಕ, ಬೆವರು, ಹಲ್ಲುಕಡಿಯುವಿಕೆ, ಕಣ್ಣು ಕೆಂಪು– ಮೊದಲಾದವುಗಳಾಗಬಾರದು. ಹೀಗೆ ಅವುಗಳನ್ನು ತಡೆಯು ವವನೇ ಯೋಗಿ. ಅವನೇ ಸುಖಿ. ಅವನು ಬದುಕಿರುವಾಗಲೆ ಬ್ರಹ್ಮ ವನ್ನು ಪಡೆದವನು. ಈ ಜ್ಞಾನಕ್ಕೆ ಕರ್ಮಯೋಗವು ಹೊರಗಣ ಸಾಧನ; ಧ್ಯಾನಯೋಗವು ಒಳಗಣ ಸಾಧನ.

**ಅ.**—ಸಂನ್ಯಾಸವನ್ನು ಮಾಡಿ–ಎಂದರೆ ಕರ್ಮಗಳನ್ನೆಲ್ಲ ಬಿಟ್ಟು–ಜ್ಞಾನ ವನ್ನು ಸಾಧಿಸಬೇಕೆನ್ನುತ್ತಾರೆ. ನೀನು ಕರ್ಮಯೋಗವನ್ನು ಎಂದರೆ–ಕರ್ಮ ವನ್ನು ಮಾಡುವದನ್ನು– ಜ್ಞಾನಸಾಧನವೆನ್ನುತ್ತಿ. ಇದು ಹೇಗೆ ?

## —ಧ್ಯಾನಯೋಗದ ಸಾಮಾನ್ಯಜ್ಞಾನ—

**ಕೃ.**—ಕರ್ಮಯೋಗಿಯು ಒಂದು ದೃಷ್ಟಿಯಿಂದ ಯೋಗಿಯೂ ಆಗುತ್ತಾನೆ; ಒಂದು ದೃಷ್ಟಿಯಿಂದ ಸಂನ್ಯಾಸಿಯೂ ಆಗುತ್ತಾನೆ. ಹೇಗೆಂದರೆ ಅವನು ಕರ್ಮವನ್ನು ಮಾಡುವದರಿಂದ ಯೋಗಿ; ಫಲದ ಬಯಕೆಯನ್ನು ಬಿಟ್ಟಿರುವದರಿಂದ ಸಂನ್ಯಾಸಿ. ನಿಜವಾದ ಸಂನ್ಯಾಸಿಯು ಕರ್ಮಗಳನ್ನೂ ಅವುಗಳ ಫಲಗಳ ಬಯಕೆಯನ್ನೂ ಕೂಡ ಬಿಟ್ಟಿರುತ್ತಾನೆ. ಕರ್ಮಯೋಗಿಯು ಬಯಕೆಯನ್ನು ಮಾತ್ರ ಬಿಟ್ಟಿರುತ್ತಾನೆ. ಇಷ್ಟೇ ಭೇದ. ಬಿಟ್ಟಿರುವದೆಂಬುದು ಇಬ್ಬರಿಗೂ ಸಮ.

**ಅ.**—ಕರ್ಮಯೋಗವನ್ನು ಹೊರಗಣ ಸಾಧನವೆಂದೂ ಧ್ಯಾನಯೋಗವನ್ನು ಒಳಗಣ ಸಾಧನವೆಂದೂ ಹೇಳುತ್ತಿ. ಅವೆರಡನ್ನೂ ಜೊತೆಯಲ್ಲಿ ನಡೆಸುವದಕ್ಕಾಗುವದೆ ?

**ಕೃ.**—ಇಲ್ಲ. ಕರ್ಮವು ಮನಸ್ಸನ್ನು ಹೊರಗೆ ಹರಿದಾಡಿಸತಕ್ಕದ್ದು. ಧ್ಯಾನವು ಮನಸ್ಸನ್ನು ಒಳಗೇ ನಿಲ್ಲಿಸತಕ್ಕದ್ದು. ಇವೆರಡೂ ಕೂಡಿ ನಡೆಯಲಾರವು. ಮನಸ್ಸು ಒಳಮುಖವಾಗಿ ನಿಲ್ಲುವ ಯೋಗ್ಯತೆಯನ್ನು ಪಡೆಯುವ ತನಕ ಕರ್ಮಯೋಗವನ್ನು ಮಾಡುವದು ಸಾಧನ. ಅದು ಒಳಮುಖವಾಗಿ ನಿಲ್ಲುವಂತಾದ ಮೇಲೆ ಎಲ್ಲ ಕರ್ಮಗಳನ್ನೂ ಬಿಡುವದು ಸಾಧನ. ಕರ್ಮವನ್ನು ಎಷ್ಟೆಷ್ಟರ ಮಟ್ಟಿಗೆ ಬಿಡುತ್ತ ಬಂದರೆ ಮನಸ್ಸು ಅಷ್ಟಷ್ಟರ ಮಟ್ಟಿಗೆ ಒಂದು ಕಡೆ ನಿಲ್ಲುತ್ತದೆ.

**ಅ.**—ಮನಸ್ಸಿಗೆ ಒಳಮುಖವಾಗಿ ನಿಲ್ಲುವ ಯೋಗ್ಯತೆ ಯಾವಾಗ ಬರುತ್ತದೆ ?

**ಕೃ.**—ಪ್ರಯೋಜನವಿಲ್ಲವಾದ್ದರಿಂದ ನಾನು ಯಾವ ಕರ್ಮವನ್ನೂ ಮಾಡಬೇಕಾದ್ದಿಲ್ಲವೆಂಬ ಮತ್ತು ನನಗೆ ಈ ಲೋಕದಲ್ಲಾಗಲಿ ಪರಲೋಕದಲ್ಲಾಗಲಿ ಏನನ್ನೂ ಪಡೆಯಬೇಕಾದ್ದಿಲ್ಲವೆಂಬ ತಿಳಿವಳಿಕೆ ಯಾವಾಗ ನೈಗೂಡುತ್ತದೊ ಆಗ ಅವನ ಮನಸ್ಸಿಗೆ ಒಳಮುಖವಾಗಿ ನಿಲ್ಲುವ ಯೋಗ್ಯತೆ ಬಂತೆಂದು ತಿಳಿಯಬೇಕು. ಸಂಸಾರವೆಂಬ ಸಮುದ್ರದಲ್ಲಿ ಜಾರಿಬಿದ್ದು ಒದ್ದಾಡುತ್ತ ಗುಟಕುನೀರು ಕುಡಿದು ತೇಲುಗಣ್ಣು ಮೇಲುಗಣ್ಣಾಗಿರುವ ತನ್ನನ್ನು ಈ ಧ್ಯಾನಯೋಗದ ಮೆಟ್ಟಿಲ ಮೇಲೆ ತಾನೆ

haa Krisha. Krishna. haa. Maddarama-haa-tarkim



ಮೇಲಕ್ಕೆತ್ತಿ ನಿಲ್ಲಿಸಬೇಕೇ ಹೊರತು ಮತ್ತಷ್ಟು ತಳಕ್ಕೆ ಹೋಗಗೊಡ ಬಾರದು.

**ಅ.**—ಸಂಸಾರದಲ್ಲಿ ಎಷ್ಟೋ ಬಂಧುಜನರ ನೆರವು ಇರುವದಲ್ಲ! ತನ್ನನ್ನು ತಾನೆ ಎತ್ತಬೇಕೆಂಬುದೇನು?

**ಕೃ.**—ಆ ನೆರವು ಸಂಸಾರದಲ್ಲಿಯೇ ಇನ್ನಷ್ಟು ಆಳದಲ್ಲಿ ಮುಳುಗಿ ರುವದಕ್ಕೇ ಹೊರತು ದಡಕ್ಕೆ ಬರುವದಕ್ಕಲ್ಲ. ದಡಕ್ಕೆ ಬರುವ ವಿಷಯ ದಲ್ಲಿ ಬಂಧುಗಳೆಂಬುವರು ನೆರವಾಗದಿರುವದಿಷ್ಟೇ ಅಲ್ಲ; ನಿನಗೆ ವಿರೋಧ ವನ್ನೆ ಮಾಡುವರು. ಅದೇನೆಂದರೆ ಸ್ನೇಹವೆಂಬ ಹಗ್ಗದಿಂದ ನಿನ್ನನ್ನು ತಮ್ಮ ಕಡೆಯ ಪ್ರೇಮವೆಂಬ ಸಮುದ್ರದ ಸುಳಿಯ ಸೆಳವಿನ ಕಡೆಗೇ ಸೆಳೆಯುವರು. ಆದ್ದರಿಂದ ತಾನೇ ತನಗೆ ಬಂಧು; ತಾನೇ ತನಗೆ ಹಗೆ.

**ಅ.**—ಎಂಥವನು ತನಗೆ ತಾನೇ ಬಂಧು? ಎಂಥವನು ತನಗೆ ತಾನೆ ಹಗೆ?

**ಕೃ.**--ದೇಹ, ಇಂದ್ರಿಯ- ಮೊದಲಾದವುಗಳನ್ನು ತನ್ನ ಹಿಡಿತದಲ್ಲಿ ಟ್ಟುಕೊಂಡಿರುವವನು ತನಗೆ ತಾನೆ ಬಂಧು. ಅವುಗಳನ್ನು ಹರಿಯಬಿಟ್ಟಿ ರುವವನು ತನಗೆ ತಾನೆ ಹಗೆ-- ಎಂದರೆ ಮತ್ತೊಬ್ಬರು ತನಗೆ ಹೇಗೆ ಹಾನಿ ಯನ್ನು ಮಾಡುತ್ತಾರೋ ಹಾಗೆ ತನಗೆ ತಾನೆ ಹಾನಿಯನ್ನು ಮಾಡಿಕೊಳ್ಳು ವವನು. ದೇಹವನ್ನೂ ಇಂದ್ರಿಯಗಳನ್ನೂ ಮನಸ್ಸನ್ನೂ ಹಿಡಿತದಲ್ಲಿಟ್ಟು ಕೊಂಡಿರುವವನಿಗೆ ಪರಮಾತ್ಮನು ತನ್ನ ಆತ್ಮವಾಗಿ ಕಾಣಿಸಿಕೊಳ್ಳುತ್ತಾನೆ. ಹೀಗಾಗಿ ಅವನು ಬಂಗಾರದ ಗಟ್ಟಿಯನ್ನು ಮಣ್ಣು ಹೆಂಟೆಯೆಂದು ಕಾಣು ವಷ್ಟು ವಿರಕ್ತನಾಗಿ ಪಾಪಿಗಳನ್ನು ಕೂಡ ಕೆಟ್ಟ ಕಣ್ಣಿನಿಂದ ನೋಡದೆ ಸಮಬುದ್ಧಿಯುಳ್ಳವನಾಗಿರುವನು.

**ಅ.**—ಈ ಉತ್ತಮವಾದ ಫಲವು ಬರಬೇಕಾದರೆ ಏನು ಮಾಡಬೇಕು

**ಕೃ.**—ಅದಕ್ಕೆ ಸಾಧನವು ಧ್ಯಾನ. ಧ್ಯಾನವನ್ನು ಮಾಡಬೇಕೆನ್ನು ವವನು ಯಾವಾಗಲೂ ಯಾರೂ ಇಲ್ಲದೆಡೆಯಲ್ಲಿ ಒಂಟಿಯಾಗಿ ಕುಳಿತು ಮನಸ್ಸನ್ನೂ ದೇಹವನ್ನೂ ಬಿಗಿಹಿಡಿದು ಯಾವ ಬಯಕೆಯೂ ಉಪಕರಣ ಗಳ ತೊಡಕೂ ಇಲ್ಲದವನಾಗಿ ಯೋಗಾಸನದಲ್ಲಿ ಕುಳಿತು ತನ್ನ ಮನ ಸ್ಸನ್ನು ಆತ್ಮಚಿಂತನೆಯಲ್ಲಿ ತೊಡಗಿಸಬೇಕು.

P. Rama Swamy. Panemangalore South Kanara



**ಅ.**—ಯೋಗಾಸನದ ಬಗೆ ಹೇಗೆ ?

## —ಧ್ಯಾನಯೋಗದ ವಿವರ—

**ಕೃ.**—ಚೊಕ್ಕಟವಾಗಿರುವ ಕಡೆ ಅಲ್ಲಾಡದಿರುವಂತೆ ಒಂದು ಪೀಠವನ್ನು ಮಾಡಬೇಕು. ಅದು ಬಹು ಎತ್ತರವಾಗಿಯೂ ಇರಬಾರದು ; ಬಹು ತಗ್ಗಾಗಿಯೂ ಇರಬಾರದು. ನೆಲದ ಮೇಲೆ ದರ್ಭೆ, ದರ್ಭೆಯ ಮೇಲೆ ಕೃಷ್ಣಾಜಿನ, ಅದರ ಮೇಲೆ ಬಟ್ಟೆ— ಈ ರೀತಿಯಲ್ಲಿ ಹಾಕಬೇಕು. ಅದರ ಮೇಲೆ ಕುಳಿತು ಧ್ಯಾನವನ್ನು ಮಾಡಬೇಕು.

**ಅ.**—ಧ್ಯಾನವನ್ನು ಮಾಡುವದು ಹೇಗೆ ?

**ಕೃ.**—ದೇಹದ ಮತ್ತು ಇಂದ್ರಿಯಗಳ ಕೆಲಸಗಳನ್ನೆಲ್ಲ ಬಿಗಿಹಿಡಿದು ಮನಸ್ಸನ್ನು ವಿಷಯಗಳಿಂದ ಹಿಂದಿರುಗಿಸಿ ಆತ್ಮಸ್ವರೂಪದ ಮೇಲೆ ಏಕಮುಖವಾಗಿ ಮಾಡುವದು.

**ಅ.**—ಧ್ಯಾನಕ್ಕೆಂದು ಕುಳಿತಾಗ ಶರೀರದ ನಿಲವು ಹೇಗಿರಬೇಕು ?

**ಕೃ.**—ಶರೀರವೂ ಕುತ್ತಿಗೆಯೂ ತಲೆಯೂ ಅಲ್ಲಾಡದಂತೆ ನೆಟ್ಟಗೆ ನಿಂತಿರಬೇಕು ; ಮೂಗಿನ ತುದಿಯನ್ನು ನೋಡುತ್ತಿರುವವನಂತೆ ದೃಷ್ಟಿಯನ್ನು ನಿಲ್ಲಿಸಿಕೊಂಡಿರಬೇಕು. ಆದರೆ ಮೂಗಿನ ತುದಿಯನ್ನೇ ನೋಡಬಾರದು. ಅತ್ತಿತ್ತ ನೋಡದೆ ಆತ್ಮನನ್ನು ನೋಡುತ್ತಿರಬೇಕು.

**ಅ.**—ಈ ಸಮಯದಲ್ಲಿ ಅವನ ವ್ಯವಹಾರದ ಪರಿಸ್ಥಿತಿ ಹೇಗಿದ್ದರೆ ಅನುಕೂಲ ?

**ಕೃ.**—ಅವನು ಗುರುಸೇವೆಯನ್ನು ಮಾಡಿಕೊಂಡು ಮಾಧುಕರಿಯ (ಭಿಕ್ಷಾನ್ನವ)ನ್ನುಂಡುಕೊಂಡಿರುವದೊಳ್ಳೆಯದು.

**ಅ.**—ಅವನ ಮನಸ್ಸಿನ ಭಾವನೆ ಹೇಗಿರಬೇಕು ?

**ಕೃ.**—ಅವನಿಗೆ ಆತ್ಮನ ಮೇಲೆ ಪ್ರೇಮವಿರುವದಿಷ್ಟೇ ಅಲ್ಲ ; ಆತ್ಮನೇ ತನಗೆ ಗತಿಯೆಂಬ ಭಾವನೆ ಇರಬೇಕು. ಸ್ತ್ರೀಯ ಮೇಲೆ ಆಸಕ್ತನಾದವನು ಸ್ತ್ರೀಯ ಮೇಲೆ ಮನಸ್ಸಿಟ್ಟಿದ್ದರೂ ಸ್ತ್ರೀಯೇ ತನ್ನ ಗತಿಯೆನ್ನುವವನಾಗಿರದೆ ರಾಜನನ್ನೊ ಈಶ್ವರನನ್ನೊ ಗತಿಯೆನ್ನುವವನಾಗಿರಬಹುದಷ್ಟೆ. ಧ್ಯಾನಮಾಡುವವನು ಹಾಗಿರಬಾರದು. ಅವನಿಗೆ ಆತ್ಮನೇ ಪ್ರಿಯ ; ಆತ್ಮನೇ ಗತಿ.

ಅ.—ಧ್ಯಾನಮಾಡುವವನ ಆಹಾರ ಮೊದಲಾದ ನಿಯಮ ಹೇಗೆ ?

ಕೃ.—ತನಗೆ ಅರಗುವಷ್ಟಕ್ಕಿಂತ ಹೆಚ್ಚು ಉಣ್ಣುವದೂ ಅಥವಾ ಊಟವನ್ನೇ ತೊರೆಯುವದೂ ಧ್ಯಾನಕ್ಕೆ ಅನುಕೂಲವಲ್ಲ. ಸಾಮಾನ್ಯವಾಗಿ ಅರ್ಧಹೊಟ್ಟೆಗೆ ಅನ್ನ, ಕಾಲು ಹೊಟ್ಟೆಗೆ ನೀರು- ಹೀಗೆ ತುಂಬಿ ಇನ್ನು ಕಾಲು ಹೊಟ್ಟೆಯನ್ನು ವಾಯುವಿನ ಓಡಾಟಕ್ಕಾಗಿ ಬರಿದಾಗಿರುವಂತೆ ಬಿಡಬೇಕು. ಇದರಂತೆ ಬಹಳ ನಿದ್ರೆಯೂ ನಿದ್ರೆ ಇಲ್ಲದಿರುವದೂ ಎರಡೂ ಕೆಟ್ಟದ್ದು. ಇದರಂತೆ ಅವನ ಓಡಾಟಗಳೂ ಕೆಲಸಗಳೂ ಕೂಡ ಮಿತವಾಗಿರಬೇಕು.

ಅ.— ಧ್ಯಾನವು ಮೈಗೂಡಿದ ಗುರ್ತೇನು ?

ಕೃ.—ಒಳಗಡೆ ತಿರುಗಿಸಿ ಒಮ್ಮುಖವಾಗಿ ಮಾಡಿದ ಮನಸ್ಸು ಹೊರಗಣ ಯೋಚನೆಯನ್ನೆಲ್ಲ ಸಂಪೂರ್ಣವಾಗಿ ಬಿಟ್ಟು ಆತ್ಮನೊಬ್ಬನಲ್ಲಿಯೇ ನಿಂತರೆ ಧ್ಯಾನವು ಮೈಗೂಡಿತೆನ್ನಬೇಕು.

ಅ.— ಮನಸ್ಸು ಒಮ್ಮುಖವಾದಾಗ ಹೇಗಿರುತ್ತದೆ?

ಕೃ.—ಗಾಳಿ ಇಲ್ಲದ ಕಡೆ ಉರಿಯುತ್ತಿರುವ ದೀಪವು ಅತ್ತಿತ್ತ ಅಲ್ಲಾಡದೆ ಇರುವಂತೆ ಇರುತ್ತದೆ.

ಅ.— ಈ ಸಮಯದಲ್ಲಾಗುವ ಸುಖದಲ್ಲೇನು ವಿಶೇಷ ?

ಕೃ.— ಆ ಸುಖವು ಅಳಿದು ಹೋಗುವಂಥದ್ದಲ್ಲ. ಅದು ಇಂದ್ರಿಯಗಳಿಗೆ ಕಾಣದೆ ಕೇವಲ ಬುದ್ಧಿಗೆ ಮಾತ್ರ ತಿಳಿಯುವಂಥದ್ದು. ಆ ಸುಖಕ್ಕೆ ಸಮಾನವಾದ ಸುಖವೇ ಜಗತ್ತಿನಲ್ಲಿಲ್ಲವೆಂದು ಅವನಿಗೆ ತೋರುವದು. ಆಗ ದುಃಖವೆಂಬುದರ ಸೋಂಕೇ ಅವನಿಗಿರುವದಿಲ್ಲ.

ಅ.— ಧ್ಯಾನವು ತಡವಿಲ್ಲದೆ ಮೈಗೂಡುವದೊ ಹೇಗೆ ?

ಕೃ.— ಅದನ್ನು ಹೇಳುವದಕ್ಕಾಗುವದಿಲ್ಲ. ಧ್ಯಾನಯೋಗದಲ್ಲಿ ತೊಡಗುವವನು ಅದು ಮೈಗೂಡುವವರೆಗೂ ಎಂಥ ಅಡಚಣೆಗಳನ್ನಾದರೂ ದಾಟಿ ಸಾಧಿಸಿಯೇ ಬಿಡುತ್ತೇನೆನ್ನುವವನಾಗಬೇಕು. ಅದು ಸಿದ್ಧಿಸಲಿಲ್ಲವೆಂದು ನಡುನಡುವೆ ನಿರಾಶನಾಗಬಾರದು.

ಅ.— ಬಿಗಿಹಿಡಿದ ಮನಸ್ಸು ಹೊರಗಣ ಏನನ್ನಾದರೂ ಬಯಸಿ ಹೊರಕ್ಕೆ ನುಸಿದರೇನು ಮಾಡಬೇಕು ?

**ಕೃ.**— ತನ್ನ ಹುಟ್ಟುಗುಣದ ದೋಷದಿಂದ ಮನಸ್ಸು ಹಾಗೆ ಹರಿದರೆ ಆ ಹೊರಗಣ ವಿಷಯಗಳೆಲ್ಲ ಬರೀ ತೋರಿಕೆಯವೆಂದೂ ಅವುಗಳಲ್ಲಿ ಸುಖವಿಲ್ಲವೆಂದೂ ಬುದ್ಧಿಯನ್ನು ಹೇಳಿ ಹಿಂದಿರುಗಿಸಿ ತಂದು ಮತ್ತೆ ಆತ್ಮಸ್ವರೂಪದಲ್ಲಿಯೇ ನಿಲ್ಲಿಸಬೇಕು.

**ಅ.**— ಈ ಧ್ಯಾನದ ಫಲವೇನು ?

**ಕೃ.**— ಜ್ಞಾನವೇ ಧ್ಯಾನದ ಫಲ.

**ಅ.**— ಆ ಜ್ಞಾನದ ಬಗೆಯೇನು ?

**ಕೃ.**— ಸರ್ವಪ್ರಾಣಿಗಳಲ್ಲಿಯೂ ತಾನು ಆತ್ಮಸ್ವರೂಪದಲ್ಲಿರುವೆನೆಂದೂ ಸರ್ವಪ್ರಾಣಿಗಳೆಂಬುದು ತನ್ನ ಮನಸ್ಸಿನ ಕಲ್ಪನೆಯೆಂದೂ ಬೇರೆ ಬೇರೆಯಾಗಿ ತೋರುವ ಪ್ರಾಣಿಗಳಲ್ಲಿ ಒಬ್ಬ ಆತ್ಮನನ್ನು ನೋಡುವದು.

**ಅ.**— ಈ ಜ್ಞಾನದ ಫಲವೇನು ?

**ಕೃ.**— ಹೀಗೆ ಯಾವನು ಎಲ್ಲರಲ್ಲಿಯೂ ನನ್ನನ್ನೂ ನನ್ನಲ್ಲಿ ಎಲ್ಲವನ್ನೂ ನೋಡುವನೋ ಅವನಿಗೆ ನಾನು ದೂರನಲ್ಲ. ನನಗೆ ಅವನೂ ದೂರನಲ್ಲ. ಏಕೆಂದರೆ ನಾವಿಬ್ಬರೂ ಒಂದೇ. ತಾನು ತನಗೆ ಪ್ರಿಯನೇ ಆಗಿರುತ್ತಾನಷ್ಟೆ. ಇಂಥ ಜ್ಞಾನಿಯು ಯಾವ ರೀತಿಯಲ್ಲಿ ವ್ಯವಹರಿಸುತ್ತಿದ್ದರೂ ನಿತ್ಯಮುಕ್ತನಾಗಿ ನನ್ನಲ್ಲಿಯೇ ಇರುವನು. ಮೋಕ್ಷದ ಯಾವ ಅಡಚಣೆಗಳೂ ಅವನ ಮುಂದೆ ಬರಲಾರವು.

**ಅ.**— ಹಾಗೆ ಅವನು ಎಲ್ಲ ಪ್ರಾಣಿಗಳಲ್ಲಿಯೂ ಒಬ್ಬ ಆತ್ಮನನ್ನು ನೋಡುವ ಗುರ್ತೇನು ?

**ಕೃ.**— ಅವನು ತನಗೆ ಸುಖವು ಹೇಗೆ ಬೇಕೊ ಹಾಗೆ ಎಲ್ಲರಿಗೂ ಸುಖವು ಅನುಕೂಲವೆಂದೂ ತನಗೆ ದುಃಖವು ಹೇಗೆ ಬೇಡವೊ ಹಾಗೆ ಎಲ್ಲರಿಗೂ ದುಃಖವು ಪ್ರತಿಕೂಲವೆಂದೂ ಎಲ್ಲರನ್ನೂ ತನ್ನಂತೆ ನೋಡುತ್ತಾನೆ. ಆದ್ದರಿಂದ ಅವನು ಯಾರಿಗೂ ಯಾವ ಹಿಂಸೆಯನ್ನೂ ಮಾಡುವದೇ ಇಲ್ಲ. ಈ ಯೋಗ್ಯತೆಯನ್ನು ಹೊಂದಿದವನು ನನಗೆ ಬಹಳ ಬೇಕಾದವನು.

**ಅ.**—ಮನಸ್ಸು ಹರಿದಾಡುವ ಸ್ವಭಾವದ್ದಾದ್ದರಿಂದ ನೀನು ಹೇಳಿದ ಧ್ಯಾನವನ್ನು ಸಾಧಿಸುವದಾಗುವಂತೆ ಕಾಣುವದಿಲ್ಲ. ಮನಸ್ಸು ತಾನು ಚಂಚಲವಾಗಿರುವದೂ ಅಲ್ಲದೆ ದೇಹದ ಮೇಲೆ ಮತ್ತು ಇಂದ್ರಿಯಗಳ ಮೇಲೆ

ಕೂಡ ತನ್ನ ಕೈತೋರಿಸಿ ಅವುಗಳನ್ನು ಹೊರಮುಖವಾಗಿ ಮಾಡುತ್ತದೆ. ಅದನ್ನು ತಡೆಯುವದು ಎಂಥವರಿಗೂ ಕಷ್ಟ. ಅದನ್ನು ಜಗಿಹಿಡಿಯುವದೆಂಬುದು ಗಾಳಿಯನ್ನು ಮೂಟೆಯಾಗಿ ಕಟ್ಟಿದಂತೆಯೇ ಸರಿ.

ಕೃ.---ನಿಜ. ಮನಸ್ಸಿಗೆ ಆತ್ಮಸ್ವರೂಪವನ್ನೇ ಹಿಡಿಸುವ ಅಭ್ಯಾಸದಿಂದಲೂ ಕಂಡ ಮತ್ತು ಕೇಳಿದ ಪದಾರ್ಥಗಳೆಲ್ಲ ದೋಷಮಯವಾದವುಗಳೆಂದೆಣಿಸಿ ಏನನ್ನೂ ಬಯಸದಿರುವ ವೈರಾಗ್ಯದಿಂದಲೂ ಮನಸ್ಸನ್ನು ಜಗಿಹಿಡಿಯಬಹುದು. ಇವೆರಡೂ ಇಲ್ಲದೆ ಧ್ಯಾನವು ರೂಪುಗೊಳ್ಳುವದಿಲ್ಲ.

**ಅ.**---ಕರ್ಮಗಳನ್ನೆಲ್ಲ ಬಿಟ್ಟು ಧ್ಯಾನಯೋಗವನ್ನು ಹಿಡಿದಿರುತ್ತಾನೆನ್ನು. ಧ್ಯಾನದ ಫಲವಾದ ಜ್ಞಾನವಿನ್ನೂ ಕೈಗೂಡದೆ ಇರುವಾಗಲೆ ಸಾವು ಬಂದು ಧ್ಯಾನಯೋಗದಿಂದ ಮನಸ್ಸು ಕದಲಿದರೆ ಅವನ ಗತಿ ಏನು ? ಅವನು ಕರ್ಮಯೋಗ ಮತ್ತು ಧ್ಯಾನಯೋಗ- ಎಂಬ ಎರಡೂ ಕೆಟ್ಟು ಕುರುಡದಾಸನಾಗಿ ಹೋಗುತ್ತಾನೊ ಹೇಗೆ ?

## —ಧ್ಯಾನಯೋಗವು ಸಿದ್ಧಿಸುವದಕ್ಕೆ ಮುಂಚೆ ಸತ್ತವರ ಗತಿ—

**ಕೃ.**—ಅವನಿಗೆ ಈ ಲೋಕದಲ್ಲಾಗಲಿ ಪರಲೋಕದಲ್ಲಾಗಲಿ ಹೀನಜನ್ಮವೇನೂ ಬರುವದಿಲ್ಲ. ಒಳ್ಳೆಯದನ್ನು ಮಾಡಿದವನಿಗೆಂದಿಗೂ ಕೆಟ್ಟದಾಗುವದಿಲ್ಲ. ಅವನು ದೊಡ್ಡದೊಡ್ಡ ಅಶ್ವಮೇಧ ಮೊದಲಾದ ಯಾಗಗಳನ್ನು ಮಾಡಿದವರು ಹೋಗುವ ಲೋಕಕ್ಕೆ ಹೋಗಿ ಅಲ್ಲಿ ಬಹುಕಾಲವಿದ್ದು ಆಮೇಲೆ ವೇದದಲ್ಲಿ ಹೇಳಿರುವ ಕರ್ಮಗಳನ್ನು ಮಾಡುವಂಥ ಸಿರಿವಂತರ ಮನೆಯಲ್ಲಿಯೇ ಹುಟ್ಟುತ್ತಾನೆ. ಅಥವಾ ಬಡವರೂ ಬುದ್ಧಿಶಾಲಿಗಳೂ ಆಗಿ ಧ್ಯಾನಪರರಾಗಿರುವವರ ಮನೆತನದಲ್ಲಿಯೇ ಹುಟ್ಟುತ್ತಾನೆ. ಈ ಧ್ಯಾನಪರರ ಮನೆತನದಲ್ಲಿ ಹುಟ್ಟು ದೊರೆಯುವದು ಕಷ್ಟ.

**ಅ.**----ಧ್ಯಾನಪರರ ಮನೆತನದಲ್ಲೇನು ವಿಶೇಷ ?

**ಕೃ.**—ಅಲ್ಲಿ ಅವನಿಗೆ ತನಗರಿವಿಲ್ಲದೆ ಹಿಂದಿನ ಜನ್ಮದ ಬುದ್ಧಿ ಬರುತ್ತದೆ. ಮತ್ತು ಅವನು ತನ್ನ ಧ್ಯಾನವನ್ನು ಮುಂದೆ ಸಾಗಗೊಡದಂಥ ಪ್ರಬಲವಾದ ಪಾಪವನ್ನು ಮಾಡಿರದಿದ್ದರೆ ತನ್ನ ಸಿದ್ಧಿಗಾಗಿ ಅವನ ಪ್ರಯತ್ನವು ಹಿಂದಕ್ಕಿಂತ ಹೆಚ್ಚುಹೆಚ್ಚು ಮುಂದೆ ಸಾಗುತ್ತದೆ. ಬಲವಾದ

ಪಾಪವೇನಾದರೂ ಫಲವನ್ನು ಕೊಡುವದಕ್ಕೆ ಬಂದಿದ್ದರೆ ಮಾತ್ರ ಕೆಲವು ಕಾಲ ಆ ಧ್ಯಾನದ ಸಂಸ್ಕಾರವು ಮಂಕಾಗಬಹುದು. ಆ ಪಾಪವು ಕಳೆಯುತ್ತಲೆ ಧ್ಯಾನದ ಸಂಸ್ಕಾರವು ತನ್ನ ಕೆಲಸವನ್ನು ಮೊದಲುಮಾಡುತ್ತದೆ. ಎಷ್ಟು ದಿನ ಕಳೆದರೂ ಅದಕ್ಕೆ ನಾಶವಿಲ್ಲ. ಹೀಗೆ ಜ್ಞಾನದ ಸ್ವರೂಪವನ್ನು ತಿಳಿಯುವಿಚ್ಛೆಯಿಂದ ಧ್ಯಾನಯೋಗವನ್ನು ಹಿಡಿದು ಕೊನೆಗಾಣದೆ ಹೋದರೂ ಅವನಿಗೆ ವೈದಿಕಕರ್ಮಗಳೆಲ್ಲವುಗಳ ಫಲಕ್ಕಿಂತ ಹೆಚ್ಚಿನ ಫಲವು ದೊರೆಯುತ್ತದೆ. ಇನ್ನು ತಿಳಿದು ಧ್ಯಾನಮಾಡುವವನ ವಿಷಯವನ್ನು ಹೇಳಬೇಕಾದ್ದೇನು! ಹೀಗೆ ಪ್ರಯತ್ನಿಸುವವನು ತನ್ನ ಪಾಪಗಳನ್ನೆಲ್ಲ ಕಳೆದುಕೊಂಡು ಧ್ಯಾನದ ಸಂಸ್ಕಾರವನ್ನು ಕೂಡಿಹಾಕಿಕೊಂಡು ಕೊನೆಗೆ ಮೋಕ್ಷವನ್ನು ಹೊಂದುತ್ತಾನೆ. ಉಪವಾಸ ಮೊದಲಾದ ಕಠಿನ ವ್ರತಗಳನ್ನು ಮಾಡುವವರಿಗಿಂತಲೂ ಬರೀ ಶಾಸ್ತ್ರಜ್ಞಾನವುಳ್ಳವರಿಗಿಂತಲೂ ಅಗ್ನಿಹೋತ್ರ ಮೊದಲಾದ ಕರ್ಮಗಳನ್ನು ಮಾಡುವವರಿಗಿಂತಲೂ ಧ್ಯಾನಯೋಗಿಯು ಹೆಚ್ಚಿನವನು. ಅರ್ಜುನ, ನೀನು ಧ್ಯಾನಯೋಗಿಯಾಗು.

ಅ.—ನಿನ್ನನ್ನು ಧ್ಯಾನಮಾಡುವದು ಹೆಚ್ಚಿನದು?

**ಕೃ.**—ಈ ಧ್ಯಾನಯೋಗಿಗಳಲ್ಲೆಲ್ಲ ರುದ್ರ, ಆದಿತ್ಯ- ಮೊದಲಾದ ದೇವತೆಗಳನ್ನು ಧ್ಯಾನಿಸುವವರಿಗಿಂತ ಶ್ರದ್ಧೆಯಿಂದ ನನ್ನನ್ನು ಧ್ಯಾನಿಸುವವನು ನನಗೆ ಬಹಳ ಬೇಕಾದವನು.

ಅ.—ಈಗ ಕಾಣುತ್ತಿರುವ ರೂಪವನ್ನು ನೀನು ಅವತಾರವೆಂದೆಯಲ್ಲ! ನಿನ್ನ ನಿಜವಾದ ಸ್ವರೂಪವೇನು?

## —ನಿರ್ಗುಣಸ್ವರೂಪ—

**ಕೃ.**— ಒಳ್ಳೆ ಪ್ರಶ್ನೆಯನ್ನು ಮಾಡಿದೆ. ಇದನ್ನು ತಿಳಿದರೆ ನಿನ್ನ ಹುಟ್ಟು ಸಾರ್ಥಕವಾಗುವದಕ್ಕೆ ಇನ್ನೇನೂ ತಿಳಿಯಬೇಕಾದದ್ದುಳಿದಿರುವದಿಲ್ಲ. ಇದನ್ನು ತಿಳಿಯಲು ಸಾವಿರಕ್ಕೊಬ್ಬನು ಪ್ರಯತ್ನಿಸುತ್ತಾನೆ. ಅದರಲ್ಲಿ ಯಾವನೋ ಒಬ್ಬನು ಆ ಸ್ವರೂಪವನ್ನು ಇದ್ದದ್ದಿದ್ದಂತೆ ತಿಳಿಯುತ್ತಾನೆ. ನನ್ನ ನಿಜಸ್ವರೂಪವು ಈ ಎಲ್ಲ ಜಗತ್ತಿನ ಆಗುಹೋಗುಗಳಿಗೆಲ್ಲ ಕಾರಣವಾದ ಚೈತನ್ಯವು.

ಅ.----ನಿನ್ನಿಂದ ಈ ಜಗತ್ತಾದದ್ದು ಹೇಗೆ ?

ಕೃ.--ನನ್ನ ಮಾಯಾಶಕ್ತಿಯು ಎರಡು ಬಗೆಯಾಗಿದೆ. ನೆಲ, ನೀರು, ಬೆಂಕಿ, ಗಾಳಿ, ಬಯಲು, ಮನಸ್ಸಿನ ಕಾರಣವಾದ ಅಹಂಕಾರ, ಅಹಂಕಾರದ ಕಾರಣವಾದ ಮಹತ್ತು (ಬುದ್ಧಿ), ಎಲ್ಲ ಜಗತ್ತಿನ ಬೀಜರೂಪವಾದ ಅವ್ಯಕ್ತ- ಎಂಬೆಂಟು ರೂಪದಲ್ಲಿ ಹರಡಿಕೊಂಡಿರುವ ಜಡರೂಪವು ಒಂದು. ಇದು ಮನುಷ್ಯನನ್ನು ಹುಟ್ಟುಸಾವುಗಳಿಗೊಳಪಡಿಸುವ ಕೀಳು ಸ್ವಭಾವದ್ದಾದ್ದರಿಂದ ಇದಕ್ಕೆ 'ಅಪರಾ' ಎಂದು ಹೆಸರು. ಇದಕ್ಕಿಂತ ಬೇರೆಯಾಗಿ ಜಗತ್ತನ್ನೆಲ್ಲ ಒಳಹೊಕ್ಕು ಹೊತ್ತುಕೊಂಡಿರುವ ಮತ್ತು ಶರೀರದಲ್ಲಿ ಪ್ರಾಣವಾಯುವನ್ನು ಹಿಡಿದು ನಿಲ್ಲಿಸಿಕೊಂಡಿರುವ ಜೀವರೂಪ ಇನ್ನೊಂದು. ಇದು ಶುದ್ಧವಾದದ್ದರಿಂದ ಇದಕ್ಕೆ 'ಪರಾ' ಎಂದು ಹೆಸರು. ಕಾಣುವ ಎಲ್ಲಕ್ಕೂ ಈ ಎರಡು ಬಗೆಯ ಮಾಯಾಶಕ್ತಿಯೇ ಕಾರಣ. ಆದ್ದರಿಂದ ಜಗತ್ತಿನ ಹುಟ್ಟುವಿಕೆಗೂ ಹೋಗುವಿಕೆಗೂ ಕಾರಣನಾಗಿರುವ ಚೈತನ್ಯರೂಪನಾದ ನಾನು ಮಣಿಗಳನ್ನು ಪೋಣಿಸಿಕೊಂಡಿರುವ ದಾರದಂತೆ ಜಗತ್ತನ್ನೆಲ್ಲ ಪೋಣಿಸಿಕೊಂಡಿರುವವನಾಗಿರುವೆನು.

ಅ.--ನೀನು ಜಗತ್ತನ್ನೆಲ್ಲ ಪೋಣಿಸಿಕೊಂಡಿರುವ ರೀತಿಯನ್ನು ಸ್ವಲ್ಪ ಮಟ್ಟಿಗಾದರೂ ವಿವರಿಸು.

ಕೃ.--ನಾನು ರಸದ ರೂಪದಿಂದ ಎಲ್ಲ ನೀರುಗಳಲ್ಲಿಯೂ ಬೆಳಕಿನ ರೂಪದಿಂದ ಸೂರ್ಯ, ಚಂದ್ರ- ಮೊದಲಾದ ಬೆಳಗುವ ವಸ್ತುಗಳಲ್ಲಿಯೂ ಓಂಕಾರದ ರೂಪದಿಂದ ಎಲ್ಲ ವೇದಗಳಲ್ಲಿಯೂ ಶಬ್ದದ ರೂಪದಿಂದ ಆಕಾಶದಲ್ಲಿಯೂ- ಹೀಗೆ ಬೇರೆ ಬೇರೆ ಧರ್ಮಗಳ ರೂಪದಿಂದ ನಾನು ಎಲ್ಲ ವಸ್ತುಗಳಲ್ಲಿಯೂ ತೂರಿಕೊಂಡಿರುವೆನು.

ಅ.—ಜಗತ್ತೆಲ್ಲ ನಿನ್ನಿಂದ ಹುಟ್ಟಿದ್ದಾದ್ದರಿಂದಲೆ ಅದರ ಮೇಲೆ ನಿನಗೆ ಪ್ರೇಮವಿರಬಹುದಲ್ಲವೆ ?

ಕೃ.—ಹುಟ್ಟಿ ಸಾಯುವ ಸ್ವಭಾವದ ಜನರು ಜಗತ್ತಿನ ಸೆಳೆತಕ್ಕೆ ಸಿಕ್ಕಿ ಹೇಗೆ ಪ್ರೇಮಮಾಡುತ್ತಾರೊ ನಾನು ಹಾಗಲ್ಲ. ನಾನು ಅವುಗಳನ್ನು ಆಳತಕ್ಕವನಾಗಿರುವೆನು.

ಅ.--ಈ ನಿನ್ನ ನಿರ್ಗುಣಸ್ವರೂಪವನ್ನು ಜನರು ಅರಿಯದಿರುವದಕ್ಕೆ ಕಾರಣವೇನು ?

ಕೃ.--ಪ್ರೀತಿ, ಹಗೆತನ, ಭ್ರಾಂತಿ- ಈ ಮೂರು ಗುಣಗಳಿಂದ ಕೂಡಿದ ಈ ಜಗತ್ತಿನಿಂದ ಜನರು ಮಂಕುಬಡಿದವರಾಗಿರುವದರಿಂದ ಆ ಗುಣಗಳಿಗಿಂತ ಬೇರೆಯಾಗಿ ಎಂದೆಂದಿಗೂ ಅಳ್ಳಳಿಯದಿರುವ ನನ್ನ ಸ್ವರೂಪವನ್ನು ಅರಿಯಲಾರದೆ ಹೋಗುವರು.

ಅ.--ಆ ಮೂರು ಗುಣಗಳಿಂದ ಕೂಡಿದ ಮಾಯೆಯನ್ನು ದಾಟುವದಕ್ಕೆ ಗತಿಯೇನು ?

## —ಮಾಯೆಯನ್ನು ದಾಟುವ ಉಪಾಯ—

ಕೃ.-ಅದನ್ನು ದಾಟುವದು ಜಗಿಯಾದ ಕೆಲಸವೇ ಸರಿ. ಮಾಯೆಯಿಂದ ಈ ಎಲ್ಲವನ್ನೂ ಹುಟ್ಟಿಸಿರುವ ಮಾಯಾವಿಯಾದ ನಾನು ಪ್ರತಿಯೊಬ್ಬರಲ್ಲಿಯೂ ಆತ್ಮಸ್ವರೂಪದಲ್ಲಿ ಒಳಹೊಕ್ಕಿರುವೆನು. ಒಳಗಡೆಗೆ ತಿರುಗಿ ಯಾರು ನನಗೆ ಶರಣೆನ್ನುತ್ತಾರೊ ಅವರು ಮಾಯೆಯನ್ನು ದಾಟಿ ಹುಟ್ಟು ಸಾವುಗಳ ಸಂಕೋಲೆಯನ್ನು ಕಳಚಿಕೊಳ್ಳುತ್ತಾರೆ.

ಅ.--ಎಲ್ಲರೂ ಏಕೆ ಈ ಉಪಾಯವನ್ನು ಹಿಡಿಯುವದಿಲ್ಲ ?

ಕೃ.—ಪಾಪವನ್ನು ಮಾಡಿ ಮಾಡಿ ಬುದ್ಧಿಯನ್ನು ಮಾಯೆಗೆ ಸೂರೆಗೊಟ್ಟು ಹಿಂಸೆ, ಸುಳ್ಳು- ಮೊದಲಾದ ರಾಕ್ಷಸಸ್ವಭಾವವನ್ನು ಹೊಂದಿದ ಅಧಮರಾದ ಜನರು ನನಗೆ ಶರಣುಬರುವದಿಲ್ಲ.

ಅ.—ಪಾಪಿಗಳ ಮಾತಿರಲಿ. ಪುಣ್ಯವಂತರಾದರೂ ನಿನ್ನ ಕಡೆಗೆ ತಿರುಗಬಹುದಲ್ಲ !

ಕೃ.—ಪುಣ್ಯವಂತರು ನನ್ನ ಕಡೆಗೆ ತಿರುಗುತ್ತಾರೆ ; ನಿಜ. ನನ್ನ ಕಡೆಗೆ ತಿರುಗುವವರಲ್ಲಿ ನಾಲ್ಕು ಗುಂಪುಗಳಿವೆ. (೧) ಕಳ್ಳರ ಕಾಟದಿಂದಲೊ ಹುಲಿ ಮೊದಲಾದ ದುಷ್ಟಮೃಗಗಳ ಹಾವಳಿಯಿಂದಲೊ ಬೇನೆಯ ಬಾಧೆಯಿಂದಲೊ ದೀನರಾದವರದೊಂದು ಗುಂಪು. (೨) ಹಣ ಮೊದಲಾದ ಸುಖಸಾಧನಗಳನ್ನು ಬಯಸುವವರದೊಂದು ಗುಂಪು. (೩) ಭಗವಂತನ ಸ್ವರೂಪವನ್ನು ತಿಳಿಯಬೇಕೆಂಬ ಕುತೂಹಲದವರದೊಂದು ಗುಂಪು (೪) ಭಗ

ವಂತನು ತನ್ನ ಆತ್ಮವೆಂದು ತಿಳಿದವರದೊಂದು ಗುಂಪು. ಈ ನಾಲ್ಕು ಗುಂಪಿನಲ್ಲಿ ಚೈತನ್ಯಸ್ವರೂಪನಾದ ನನ್ನನ್ನು ತನ್ನ ಆತ್ಮನನ್ನಾಗಿ ತಿಳಿದವನೊಬ್ಬನೇ ನನ್ನ ಮೇಲೆ ನಿಜವಾದ ಪ್ರೇಮವನ್ನುಳ್ಳವನು. ತನ್ನ ಆತ್ಮವು ತನಗೆ ಪ್ರಿಯವೆಂಬುದು ಎಲ್ಲರಿಗೂ ಗೊತ್ತಿರುವ ಮಾತು. ಆ ತಿಳಿದವನೂ ಚೈತನ್ಯಸ್ವರೂಪನಾಗಿ ವಾಸುದೇವನಾದ ನನ್ನ ಆತ್ಮವಾದ್ದರಿಂದ ನನಗೆ ಅವನ ಮೇಲೆ ಬಹು ಪ್ರೀತಿ.

**ಅ.**— ಮೊದಲನೆ ಎರಡು ಗುಂಪಿನವರು ತಮ್ಮ ಪ್ರಯೋಜನದ ಮೇಲೆ ದೃಷ್ಟಿಯುಳ್ಳವರಾದ್ದರಿಂದ ಅವರ ಮಾತನ್ನು ಬಿಟ್ಟರೂ ನಿನ್ನ ಸ್ವರೂಪವನ್ನು ತಿಳಿಯಬೇಕೆಂಬವರ ಗುಂಪಿನವರು ಉದಾರಬುದ್ಧಿಯವರಲ್ಲವೆ?

**ಕೃ.**—ನಾಲ್ಕು ಗುಂಪಿನವರೂ ಉದಾರರೆ. ಏಕೆಂದರೆ ಅವರೆಲ್ಲರೂ ತಮ್ಮ ಪ್ರತಿಷ್ಠೆಯನ್ನು ಹಿಂದಿಟ್ಟು ನನ್ನನ್ನು ದೇವರೆಂದು ಶರಣೆನ್ನುವರು. ಆದರೆ ನನ್ನ ಸ್ವರೂಪವನ್ನು ತಿಳಿಯಬೇಕೆಂದು ಎಷ್ಟೋ ಜನ್ಮಗಳಲ್ಲಿ ನಡೆಸಿದ ಪ್ರಯತ್ನವೆಲ್ಲ ಹಣ್ಣಾದವನು ಮಾತ್ರ ನನ್ನನ್ನು ತನ್ನ ಆತ್ಮವೆಂದು ತಿಳಿಯುವನು. ಆದ್ದರಿಂದ ಅವನು ಎಲ್ಲರಿಗಿಂತ ಮೇಲಾದವನು.

**ಅ.**—ನೀನೇ ಎಲ್ಲರ ಆತ್ಮನೆಂಬ ಅರಿವು ಎಲ್ಲರಿಗೂ ಏಕಾಗುವದಿಲ್ಲ?

## —ನಿರ್ಗುಣಜ್ಞಾನನಾಗದಿರುವ ಕಾರಣ—

**ಕೃ.**—ದನಕರುಗಳನ್ನೂ ಹಣಕಾಸುಗಳನ್ನೂ ಮಕ್ಕಳುಮರಿಗಳನ್ನೂ ಬಯಸುವವರು ತಮ್ಮ ಬಯಕೆಗೆ ಬುದ್ಧಿಯನ್ನು ಮಾರಿಕೊಂಡು ನನ್ನನ್ನು ಬಿಟ್ಟು ತಮ್ಮ ತಮ್ಮ ಹುಟ್ಟುಗುಣದ ಸೆಳೆತಕ್ಕೆ ಸಿಕ್ಕಿ ಕೊಚ್ಚಿಕೊಂಡು ಹೋಗುತ್ತ ಬೇರೆ ಬೇರೆ ದೇವತೆಗಳಿಗೆ ತಕ್ಕ ಬೇರೆ ಬೇರೆ ನಿಯಮಗಳನ್ನು ಹಿಡಿದು ಮುಂದುವರಿಯುತ್ತಾರೆ. ನಾನು ಅವರ ಶ್ರದ್ಧೆಯನ್ನು ಹಾಗೆಯೇ ಬಲಪಡಿಸುತ್ತೇನೆ. ಮತ್ತು ಆಯಾ ದೇವತಾರೂಪದಿಂದ ನಾನೆ ಅವರ ಬಯಕೆಗಳನ್ನೆಲ್ಲ ತೀರಿಸುತ್ತೇನೆ. ಆ ತಿಳಿಗೇಡಿಗಳಿಗೆ ದೊರೆಯುವ ಆ ಫಲವು ಮೂರು ದಿನದ ಬಾಳಿನದಾಗಿರುವದು. ನನಗೆ ಶರಣುಬರುವದರಲ್ಲಿಯೂ ಬೇರೆ ದೇವತೆಗಳ ರೂಪಕ್ಕೆ ಶರಣೆನ್ನುವದರಲ್ಲಿಯೂ ಆಯಾಸವು ಸಮಾನ

ವಾದರೂ ಅವರು ನಾಶರಹಿತವಾದ ಫಲವನ್ನು ಬಯಸಿ ನನಗೆ ಶರಣೆನ್ನುವದಿಲ್ಲ. ಅಯ್ಯೋ ಪಾಪ !

**ಅ.**—ನಿನಗೇ ಏಕೆ ಶರಣೆನ್ನುವದಿಲ್ಲ ?

**ಕೃ.**—ನಾನು ಎಂದೆಂದಿಗೂ ಇರುವ ಈಶ್ವರನಾದರೂ ದಡ್ಡರು ಈ ನನ್ನ ಭಗವತ್ಸ್ವರೂಪವನ್ನರಿಯದೆ ನಾನು ಹಿಂದೆ ಇರಲಿಲ್ಲವೆಂದೂ ಈಗ ಹುಟ್ಟಿ ತೋರುತ್ತಿರುವನೆಂದೂ ತಿಳಿಯುತ್ತಾರೆ.

**ಅ.**—ಹೀಗೇಕಾಗಿದೆ ?

**ಕೃ.**—ನಾನು ನನ್ನ ಭಕ್ತರಾದ ಕೆಲವರಿಗೆ ಹೊರತು ಎಲ್ಲರಿಗೂ ಕಾಣುವವನಲ್ಲ. ನಾನು ಮಾಯೆಯೆಂಬ ಕಣ್ಣುಕಟ್ಟಿನ ಪರದೆಯ ಮರೆಯಲ್ಲಿದ್ದೇನೆ ಆದ್ದರಿಂದ ಅವರು ನನ್ನನ್ನು ಕಾಣಲರಿಯರು.

**ಅ.**—ಮಾಯೆಯೆಂಬ ಆ ಕಣ್ಣುಕಟ್ಟಿನ ಪರದೆಯು ಇತರರ ದೃಷ್ಟಿಗೆ ತಡೆಯಾದಂತೆ ನಿನ್ನ ದೃಷ್ಟಿಗೂ ತಡೆಯಾಗಬಹುದಲ್ಲ !

**ಕೃ.**—ಆ ಮಾಯೆಯು ನಾನು ಹೇಳಿದ ಹಾಗೆ ಕೇಳುವಂಥದ್ದು. ಲೋಕದಲ್ಲಿ ಮಾಯಾವಿಯ ಮಾಯೆಯು ಇತರರಿಗೆ ಮಾತ್ರ ಕಣ್ಣುಕಟ್ಟಾಗಿ ಮಾಯಾವಿಯ ಮೇಲೆ ಹೇಗೆ ತನ್ನ ಕೈಮಾಡಲಾರದೋ ಹಾಗೆ ನನ್ನ ಮಾಯೆಯು ನನ್ನ ಮೇಲೆ ತನ್ನ ಆಟವನ್ನು ತೋರಿಸಲಾರದು. ಆದ್ದರಿಂದ ನನಗೆ ಹಿಂದಿನದು ಮತ್ತು ಮುಂದಿನದು ಎಲ್ಲ ಗೊತ್ತು. ನನ್ನ ಭಕ್ತರ ಹೊರತು ಬೇರೆ ಯಾರೂ ನನ್ನನ್ನರಿಯರು.

**ಅ.**—ಹಾಗಾದರೆ ನಿನ್ನನ್ನು ಅರಿಯುವದಕ್ಕೆ ದಾರಿಯಾವದು ?

**ಕೃ.**—ಪುಣ್ಯವನ್ನು ಮಾಡಿ ಮಾಡಿ ಪಾಪದ ವಾಸನೆಗಳ ಬೇರುಗಳನ್ನೆಲ್ಲ ಕಿತ್ತುಹಾಕಿದವರು ಈ ಪ್ರೀತಿ, ಹಗೆತನ, ಭ್ರಾಂತಿ- ಮೊದಲಾದವುಗಳ ರೂಪವಾದ ಮಾಯಾಶಕ್ತಿಯನ್ನು ದಾಟಿ ನನ್ನ ನಿಜಸ್ವರೂಪವೆಂಥದ್ದೆಂದು ಚೆನ್ನಾಗಿ ಗೊತ್ತುಮಾಡಿಕೊಳ್ಳುತ್ತಾರೆ. ಮುಪ್ಪು, ಮರಣ- ಮೊದಲಾದವುಗಳ ಯಾತನೆಯನ್ನು ಕಳೆದುಕೊಳ್ಳಬೇಕೆಂದು ಯಾರು ನನಗೆ ಶರಣುಬಂದು ಯತ್ನಿಸುವವರಾಗಿ ನನ್ನ ಬ್ರಹ್ಮ, ಅಧ್ಯಾತ್ಮ, ಅಧಿಭೂತ, ಅಧಿದೈವ, ಅಧಿಯಜ್ಞ- ಮೊದಲಾದ ಸ್ವರೂಪಗಳನ್ನೆಲ್ಲ ತಿಳಿಯುವರೋ ಅವರು

ಸಾಯುವಾಗ ಕೂಡ ನನ್ನಲ್ಲಿಯೇ ಮನಸ್ಸುಳ್ಳವರಾಗಿ ನನ್ನನ್ನು ತಿಳಿಯು ವರು.

ಅ.--ಬ್ರಹ್ಮ, ಅಧ್ಯಾತ್ಮ- ಮೊದಲಾದ ಸ್ವರೂಪಗಳ ವಿಷಯವನ್ನು ನಾನು ತಿಳಿಯಲಿಚ್ಛಿಸುತ್ತೇನೆ.

**ಕೃ.**—(೧) ಎಂದಿಗೂ ಅಚ್ಚಳಿಯದಿರುವ ಪರಮಾತ್ಮನೇ ಬ್ರಹ್ಮ (೨) ಆ ಬ್ರಹ್ಮನೇ ಪ್ರತಿದೇಹದಲ್ಲಿಯೂ ಒಳಗೆ ಆತ್ಮಭಾವದಿಂದಿರುವದೇ ಅಧ್ಯಾತ್ಮ. (೩) ಪ್ರಾಣಿಗಳ ಹುಟ್ಟುವಿಕೆಯು ಸಾಗುತ್ತಿರುವಂತೆ ದೇವತೆ ಗಳಿಗಾಗಿ ಹೋಮವನ್ನು ಮಾಡುವದು ಕರ್ಮ. (೪) ಪ್ರಾಣಿಗಳಿಗಾಗಿ ಹುಟ್ಟಿ ಹೋಗುವ ವಸ್ತುಗಳೆಲ್ಲ ಅಧಿಭೂತ. (೫) ಎಲ್ಲ ಪ್ರಾಣಿಗಳ ಇಂದ್ರಿಯಗಳಿಗೂ ಶಕ್ತಿಯನ್ನು ಕೊಡುವವನಾಗಿ ಸೂರ್ಯಬಿಂಬದಲ್ಲಿರುವ ಹಿರಣ್ಯಗರ್ಭನು ಅಧಿದೈವತ. (೬) ಈ ದೇಹದಿಂದ ನಡೆಯುವ ಸರ್ವಯಜ್ಞಗಳ ಅಭಿಮಾನದೇವತೆಯಾದ ವಿಷ್ಣು ನಾನು. (೭) ಸಾಯುವಾಗ ಕೂಡ ಪರಮೇಶ್ವರನಾದ ನನ್ನನ್ನೆ ನೆನೆಯುತ್ತ ದೇಹವನ್ನು ಬಿಟ್ಟವನು ನನ್ನನ್ನೆ ಸೇರುತ್ತಾನೆ. ಈ ಏಳು ಮುಖ್ಯವಾದ ವಿಷಯಗಳು.

**ಅ.**---ಸಾಯುವಾಗ ನಿನ್ನನ್ನೆ ನೆನೆದವನು ನಿನ್ನನ್ನೇ ಸೇರುವನೆಂಬ ಮಾತು ಆಶ್ಚರ್ಯಕರವಾಗಿದೆ!

## —ಸಾಯುವ ಕಾಲದಲ್ಲಿ ಬರುವ ಸ್ಮರಣೆಯ ವಿಚಾರ--

**ಕೃ.**—ಈ ನಿಯಮವು ಬರೀ ನನ್ನ ವಿಷಯದಲ್ಲಿ ಮಾತ್ರವೇ ಅಲ್ಲ; ಸಾಯುವಾಗ ಯಾವಯಾವ ದೇವತಾಭಾವವನ್ನು ನೆನೆಯುತ್ತಾನೊ ಆಯಾ ದೇವತಾಭಾವವನ್ನೇ ಹೊಂದುತ್ತಾನೆ. ಅರ್ಜುನ, ಆದ್ದರಿಂದ ನೀನು ನನ್ನನ್ನು ನೆನಪಿನಲ್ಲಿಟ್ಟುಕೊಂಡು ನಿನ್ನ ಸ್ವಧರ್ಮವಾದ ಯುದ್ಧವನ್ನು ಮಾಡು. ಇದರಿಂದ ನೀನು ನನ್ನನ್ನೆ ಸೇರುವೆ.

**ಅ.**— ಸಾಯುವಾಗ ಬರಬೇಕಾದ ಭಾವನೆಯನ್ನು ಈಗ ಅಭ್ಯಾಸ ಮಾಡುವದು ಹೇಗೆ?

**ಕೃ.**—ನನ್ನಲ್ಲಿಯೇ ಮನಸ್ಸನ್ನಿಟ್ಟು ಎಡೆಬಿಡದೆ ನನ್ನ ರೂಪನ್ನೆ ಮನಸ್ಸಿಗೆ ತುಂಬಿಕೊಂಡು ಬೇರೊಂದು ಕಲ್ಪನೆಯನ್ನು ಒಳಕ್ಕೆ ಬರಗೊಡದೆ

ಸಾಧನೆಮಾಡುವದು ಅಭ್ಯಾಸ. ಶಾಸ್ತ್ರದಲ್ಲಿ ಹೇಳಿರುವದನ್ನೂ ಗುರುಗಳು ಹೇಳುವದನ್ನೂ ಹೊಂದಿಸಿಕೊಂಡು ಧ್ಯಾನಮಾಡುವವನು ಸೂರ್ಯಮಂಡಲದಲ್ಲಿರುವ ಸರ್ವೋತ್ಕೃಷ್ಟಪುರುಷನನ್ನು ಪಡೆಯುವನು. ಆ ಪುರುಷನು ಸರ್ವಜ್ಞನು, ಬಹುಹಿಂದಿನವನು, ಜಗತ್ತನ್ನು ಆಳುವವನು, ಕರ್ಮಗಳಿಗೆಲ್ಲ ಫಲವನ್ನು ಕೊಡುವವನು ಮತ್ತು ಅಜ್ಞಾನದ ಸೋಂಕಿಲ್ಲದವನು.

**ಅ.**—ಸಾಯುವಾಗ ಆ ಭಾವನೆಯು ಹೇಗೆ ಪರಿಣಮಿಸುವದು ?

**ಕೃ.**—ಸಾಧಕನು ಸಾಯುವಾಗ ಆ ಸ್ವರೂಪದ ಮೇಲಿರುವ ಪ್ರೇಮವಿಶೇಷದ ಬಲದಿಂದ ಮೊದಲು ಇಂದ್ರಿಯಗಳನ್ನೆಲ್ಲ ಬಿಗಿಹಿಡಿದು ಮನಸ್ಸನ್ನು ಹೃದಯದಲ್ಲಿ ನಿಲ್ಲಿಸಿಕೊಂಡು ಅಲ್ಲಿಂದ ಮೇಲಕ್ಕೆ ಹೋಗುವ ಸುಷುಮ್ನಾ ಎಂಬ ನಾಡಿಯ ಮಾರ್ಗವಾಗಿ ಪ್ರಾಣವಾಯುವನ್ನು ಒಂದೊಂದಾಗಿ ಮೆಟ್ಟಿಲು ಹತ್ತಿದಂತೆ ಏರಿಸುತ್ತ ಹುಬ್ಬುಗಳ ನಡುವೆಯ ಮಾರ್ಗವಾಗಿ ನಡುನೆತ್ತಿಗೆ ಹತ್ತಿಸಿ ಅಲ್ಲಿಯೇ ಅದನ್ನು ನಿಲ್ಲಿಸಿಕೊಂಡು ಪರಬ್ರಹ್ಮನ ಹೆಸರಾದ ಅಥವಾ ಪರಬ್ರಹ್ಮನ ಪ್ರತಿಮೆಯಾದ 'ಓಂ' ಎಂಬ ಅಕ್ಷರವನ್ನುಚ್ಚರಿಸಿ ಅದರ ಅರ್ಥವಾದ ನನ್ನನ್ನು ನೆನೆಯುತ್ತ ಶರೀರವನ್ನು ಬಿಡುವನು. ಇದರಿಂದ ಅವನಿಗೆ ಉತ್ಕೃಷ್ಟವಾದ ಗತಿ ದೊರೆಯುವದು.

**ಅ.**—ಸಾಯುವಾಗ ನಿನ್ನ ನೆನಪು ಬರುವದು ಕಷ್ಟವೆಂದು ತೋರುತ್ತದೆಯಲ್ಲ !

**ಕೃ.**— ಸಾಯುವಾಗ ನಿನ್ನ ನೆನಪು ಬರಬೇಕಾದರೆ ಎರಡನೆಯ ವಿಷಯವನ್ನೆ ಮನಸ್ಸಿಗೆ ತಂದುಕೊಳ್ಳದೆ ಎಷ್ಟೋ ಕಾಲ ಎಡೆಬಿಡದೆ ನನ್ನನ್ನು ಯಾವನು ನೆನೆಯುತ್ತಾನೊ ಅವನಿಗೆ ನಾನು ಸುಲಭನಾಗುವೆನು.

**ಅ.**—ನೀನು ಸುಲಭನಾಗುವದರ ಹೆಚ್ಚುಗಾರಿಕೆ ಏನು ?

**ಕೃ.**—ನನ್ನನ್ನು ಸೇರಿದವರು ಮತ್ತೆ ಹುಟ್ಟುವದಿಲ್ಲ. ಹುಟ್ಟುವದೆಂಬುದು ದುಃಖಗಳಿಗೆಲ್ಲ ತೌರುಮನೆ ಮತ್ತು ಹುಟ್ಟಿದ ಮೇಲೆ ಸಾವು ಸಿದ್ಧ. ಇದರ ಭಯವು ತಪ್ಪುವದೇ ನಾನು ಸುಲಭನಾಗುವದರ ಹೆಚ್ಚುಗಾರಿಕೆ.

**ಅ.**—ನಿನ್ನನ್ನು ಸೇರದೆ ಬೇರೆ ಬೇರೆ ಲೋಕಗಳನ್ನು ಸೇರಿದವರಿಗೆ ಆ ಫಲವಿಲ್ಲವೆ ?

## —ಸತ್ತ ಮೇಲಿನ ವಿಚಾರ—

**ಕೃ.**--ಬ್ರಹ್ಮಲೋಕ ಮೊದಲುಗೊಂಡು ಯಾವ ಲೋಕಕ್ಕೆ ಹೋದರೂ ಮತ್ತೆ ಹುಟ್ಟಬೇಕಾಗುವದು.

**ಅ.**--ಅದೇಕೆ ?

**ಕೃ.**--ಅವೆಲ್ಲ ಒಂದು ಕಾಲದ ಕಟ್ಟಿಗೆ ಸಿಕ್ಕಿರತಕ್ಕವುಗಳು. ನಮಗೆ ಸಾವಿರ ಯುಗವಾದರೆ ಬ್ರಹ್ಮನಿಗೆ ಒಂದು ಹಗಲು ಅಥವಾ ರಾತ್ರಿ. ಹೀಗೆ ಅವನ ಆಯುಸ್ಸು ಕಳೆದುಹೋಗುವದರಿಂದ ಮತ್ತೆ ಹುಟ್ಟಲೇಬೇಕಾಗುವದು.

**ಅ.**--ಬ್ರಹ್ಮನ ಹಗಲಿನಲ್ಲಿ ಅಥವಾ ರಾತ್ರಿಯಲ್ಲಿ ನಡೆಯುವ ಕೆಲಸವೇನು ?

**ಕೃ.**--ಜಗತ್ತೆಲ್ಲ ಬ್ರಹ್ಮನ ನಿದ್ರೆಯಲ್ಲಿ ಬೀಜರೂಪವನ್ನು ಹೊಂದಿದ್ದು ಆ ಬೀಜದಿಂದ ಅವನ ಎಚ್ಚರದಲ್ಲಿ ಮತ್ತೆ ಹುಟ್ಟುತ್ತದೆ ಹೀಗೆ ಹಿಂದಿನ ಕಲ್ಪದ ಜಗತ್ತು ಬ್ರಹ್ಮನ ಹಗಲು ಬರುತ್ತಲೆ ಕಾಣಿಸಿಕೊಳ್ಳುತ್ತ ರಾತ್ರಿ ಬರುತ್ತಲೆ ಕಾಣದಂತಾಗುತ್ತಿರುತ್ತದೆ.

**ಅ.**--ಹೀಗೆ ನಡೆಯುತ್ತಿರುವದಾದರೆ ಪ್ರಾಣಿಗಳ ಗತಿ ಏನು ?

**ಕೃ.**—ಆ ಕಾಣದಂತಾಗುವ ಸ್ವರೂಪಕ್ಕಿಂತ ಬೇರೆಯಾಗಿ ಜಗತ್ತೆಲ್ಲ ನಾಶವಾದರೂ ನಾಶವಾಗದಿರುವ ಪುರಾಣಪುರುಷನೊಬ್ಬನಿದ್ದಾನೆ. ಅವನನ್ನು ಪಡೆದರೆ ಮತ್ತೆ ಹುಟ್ಟುವದಿಲ್ಲ. ಅವನೆ ನಾನು.

**ಅ.**—ಆ ಪುರುಷನ ಸ್ಥಾನವನ್ನು ಪಡೆಯುವ ಉಪಾಯವೇನು ?

**ಕೃ.**—ಆ ಪುರುಷನು ಎಲ್ಲೆಲ್ಲಿಯೂ ತುಂಬಿಕೊಂಡಿರುವನು; ಮತ್ತು ಎಲ್ಲ ಶರೀರಗಳಲ್ಲಿಯೂ ಆತ್ಮನಾಗಿರುವನು. ಆ ಪುರುಷನಿಗೆ ಹೊರತಾದ ವಸ್ತುವೆಂಬುದಿಲ್ಲವೇ ಇಲ್ಲ. ಅವನ ಹೊಟ್ಟೆಯಲ್ಲಿ ಜಗತ್ತೆಲ್ಲ ಅಡಗಿರುವದು. ಆಕಾಶವು ಎಲ್ಲ ಗಡಿಗೆಗಳಲ್ಲಿಯೂ ವ್ಯಾಪಿಸಿರುವಂತೆ ತಾನು ಎಲ್ಲೆಲ್ಲಿಯೂ ವ್ಯಾಪಿಸಿದ್ದಾನೆ. ನೀನೇ ಗತಿ ಎಂದು ಶರಣುಬಂದವರಿಗೆ ಅವನು ದೊರೆಯುವನು.

**ಅ.**—ಮತ್ತೆ ಹುಟ್ಟುವವರೂ ಮತ್ತು ಮತ್ತೆ ಹುಟ್ಟದ ಗತಿಯನ್ನು ಪಡೆಯುವವರೂ ಸತ್ತ ಮೇಲೆ ಸಾಗುವ ದಾರಿಯಲ್ಲೇನು ವಿಶೇಷ ?

**ಕೃ.**-- ಮತ್ತೆ ಹುಟ್ಟದಂತಾಗಲೆಂದು ಓಂಕಾರದ ಮೂಲಕ ಬ್ರಹ್ಮವನ್ನು ನೆನೆಯುತ್ತಿದ್ದವರನ್ನು ಅಗ್ನಿ, ಜ್ಯೋತಿ, ಹಗಲು, ಶುಕ್ಲಪಕ್ಷ, ಉತ್ತರಾಯಣ- ಈ ಕಾಲಾಭಿಮಾನದೇವತೆಗಳು ಮುಂದೆ ಜ್ಞಾನವನ್ನು ಬೆಳಗುವ ದಾರಿಯಲ್ಲಿ ಬ್ರಹ್ಮಲೋಕಕ್ಕೆ ಕರೆದುಕೊಂಡು ಹೋಗುವರು. ಅವರು ಅಲ್ಲಿದ್ದು ಜ್ಞಾನವನ್ನು ಪಡೆದು ಮುಕ್ತರಾಗುವರು. ಮತ್ತೆ ಹುಟ್ಟುವಂತೆ ಬರೀ ಕರ್ಮಗಳನ್ನು ಮಾಡುತ್ತಿದ್ದವರನ್ನು ಹೊಗೆ, ರಾತ್ರಿ, ಕೃಷ್ಣಪಕ್ಷ, ದಕ್ಷಿಣಾಯನ- ಈ ಕಾಲಾಭಿಮಾನದೇವತೆಗಳು ಅಜ್ಞಾನದಲ್ಲಿಯೆ ಕೊನೆಗಾಣುವ ಕತ್ತಲೆಯ ದಾರಿಯಲ್ಲಿ ಚಂದ್ರಲೋಕಕ್ಕೆ ಕರೆದುಕೊಂಡು ಹೋಗುವರು. ಅಲ್ಲಿ ಅವರು ತಮ್ಮ ಕರ್ಮಕ್ಕೆ ತಕ್ಕ ಸುಖವನ್ನನುಭವಿಸಿ ಮತ್ತೆ ಹುಟ್ಟುವರು.

**ಅ.**--ಮತ್ತೆ ಹುಟ್ಟದಂತಾಗುವದಕ್ಕೆ ಓಂಕಾರದ ಮೂಲಕವಾಗಿ ಬ್ರಹ್ಮವನ್ನು ನೆನೆಯುವದೊಂದೇ ಮಾರ್ಗವೋ ? ಬೇರೆ ಇನ್ನೇನಾದರೂ ಉಂಟೊ ?

## —ಆತ್ಮಸ್ವರೂಪ—

**ಕೃ.**-- ಉಂಟು. ಅದು ಯಾವದೆಂದರೆ ಮೋಕ್ಷಕ್ಕೆ ಸಾಧನವಾದ ತತ್ತ್ವಜ್ಞಾನ. ಅದು ಅನೇಕ ಸಹಸ್ರಜನ್ಮಗಳಿಂದ ಬೆನ್ನುಹತ್ತಿಬಂದಿರುವ ಪಾಪಪುಣ್ಯಗಳನ್ನೆಲ್ಲ ಕಣ್ಣುರೆಪ್ಪೆಹೊಡೆಯುವಷ್ಟು ಹೊತ್ತಿನಲ್ಲಿ ಬೇರುಸಹಿತವಾಗಿ ಸುಟ್ಟು ಬೂದಿಮಾಡುವಂಥದ್ದು; ಸುಖವು ಹೇಗೆ ನಮಗೆ ಪ್ರತ್ಯಕ್ಷವಾಗಿ ಅನುಭವಕ್ಕೆ ಬರುತ್ತದೊ ಹಾಗೆ ಇಲ್ಲಿಯೇ ಈಗಲೇ ಅನುಭವಕ್ಕೆ ಬರುವಂಥದ್ದು. ಅದನ್ನು ಪಡೆಯುವದೂ ಸುಲಭ. ಸುಲಭವಾಗಿ ದೊರೆಯುವದಾದರೂ ನಾಶವಾಗತಕ್ಕದ್ದಲ್ಲ. ಇದರಲ್ಲಿ ಶ್ರದ್ಧೆಯನ್ನಿಡುವದನ್ನು ಬಿಟ್ಟು ದೇಹವನ್ನೇ ತಾವೆಂದು ತಿಳಿದು ಹೊಟ್ಟೆಯನ್ನು ಹೊರೆಯುವದೇ ಮುಖ್ಯವೆಂದು ಭಾವಿಸುವ ಪಾಪಿಗಳು ನನ್ನ ಕಡೆಗೆ ಬರುವ ಒಂದು ದಾರಿಯಾದ ಭಕ್ತಿಮಾರ್ಗವನ್ನು ಕೂಡ ಪಡೆಯದೆ ನರಕದಲ್ಲಿಯೋ ಪಶುಪಕ್ಷಿಗಳ ಜನ್ಮದಲ್ಲಿಯೋ ಸುತ್ತುಹಾಕುತ್ತಿರುತ್ತಾರೆ. ಆ ಜ್ಞಾನವನ್ನು ವಿವರಿಸುತ್ತೇನೆ ; ಕೇಳು--

ನಾನು ಇಂದ್ರಿಯಗಳಿಗೆ ಕಾಣದ ರೀತಿಯಲ್ಲಿ ಜಗತ್ತಿನಲ್ಲೆಲ್ಲ ಹರಡಿ

ಕೊಂಡಿದ್ದೇನೆ. ಬ್ರಹ್ಮನನ್ನು ಮೊದಲುಗೊಂಡು ಸಣ್ಣ ಹುಳುಗಳವರೆಗಿನ ಎಲ್ಲ ಪ್ರಾಣಿಗಳೂ ಇಂದ್ರಿಯಗಳಿಗೆ ಕಾಣದ ಆ ನನ್ನ ಸ್ವರೂಪದಲ್ಲಿ ಅಡಕವಾಗಿರುವವು. ನನ್ನಿಂದಲೆ ಅವುಗಳ ಇರುವಿಕೆ. ನಾನೆ ಅವುಗಳ ಆತ್ಮ. ಆದ್ದರಿಂದ ನಾನು ಅವುಗಳಲ್ಲಿರುವವನೆಂದು ದಡ್ಡರಿಗೆ ತೋರುತ್ತದೆ. ನಿಜವಾಗಿ ನಾನು ಅವುಗಳಿಗೆ ಹತ್ತಿಕೊಂಡಿಲ್ಲ. ನನ್ನ ಮಾಯೆಯ ಮಹಿಮೆಯನ್ನು ನೋಡು. ಯಾವ ಪ್ರಾಣಿಗಳೂ ನಿಜವಾಗಿ ನನ್ನಲ್ಲಿಲ್ಲ. ನಾನು ಯಾವದಕ್ಕೂ ಹತ್ತಿಕೊಂಡಿಲ್ಲವಾದರೂ ಎಲ್ಲವನ್ನೂ ಹೊತ್ತಿದ್ದೇನೆ. ಈ ನನ್ನ ಆತ್ಮವೇ ಪ್ರಾಣಿಗಳನ್ನೆಲ್ಲ ಹುಟ್ಟಿಸುವದು ಮತ್ತು ಬೆಳೆಸುವದು.

**ಅ.**—ಈ ಅಭಿಪ್ರಾಯವು ಮನಸ್ಸಿಗೆ ಹಿಡಿಯುವದು ಕಷ್ಟವಾಗಿದೆ.

**ಕೃ.**—ದೃಷ್ಟಾಂತವನ್ನು ಹೇಳುತ್ತೇನೆ ; ಕೇಳು. ವಾಯುವು ಆಕಾಶದಲ್ಲಿರುವವನಾದರೂ ಎಲ್ಲೆಲ್ಲಿಯೂ ಬೀಸುತ್ತ ದೊಡ್ಡ ಪರಿಮಾಣದವನಾಗಿರುವಂತೆ ಆಕಾಶದಂತೆ ಎಲ್ಲೆಲ್ಲಿಯೂ ತುಂಬಿರುವ ನನಗೆ ಹತ್ತಿಕೊಳ್ಳದೆ ಪ್ರಾಣಿಗಳೆಲ್ಲ ನನ್ನಲ್ಲಿರುವವು.

**ಅ.**—ಪ್ರಾಣಿಗಳಿಗೆಲ್ಲ ಸೃಷ್ಟಿಯನ್ನೂ ಪ್ರಲಯವನ್ನೂ ಹೇಳುತಾರಲ್ಲ !

**ಕೃ.**—ಪ್ರಲಯಕಾಲದಲ್ಲಿ ಎಲ್ಲ ಪ್ರಾಣಿಗಳೂ ನನ್ನ ಮಾಯಾಶಕ್ತಿಯಲ್ಲಿ ಅಡಗುತ್ತವೆ. ಸೃಷ್ಟಿಕಾಲದಲ್ಲಿ ನಾನು ಅವುಗಳನ್ನು ಮಾಯೆಯಿಂದ ಹಿಂದಿನಂತೆ ಹುಟ್ಟಿಸುತ್ತೇನೆ.

**ಅ.**—ನೀನು ಹುಟ್ಟಿಸುವವನಾದರೆ ಒಬ್ಬೊಬ್ಬರನ್ನೊಂದೊಂದು ಬಗೆಯಲ್ಲಿ ಹುಟ್ಟಿಸುವ ನಿನಗೆ ಆ ಧರ್ಮಾಧರ್ಮಗಳ ಸಂಬಂಧವು ಬಂದು ಗಂಟುಬೀಳುವದಲ್ಲ !

**ಕೃ.**— ಸೃಷ್ಟಿಸುವವನೆಂಬ ಅಭಿಮಾನವಿಲ್ಲದೆ ನಾನು ಉದಾಸೀನನಾಗಿರುವದರಿಂದ ನನಗೆ ಧರ್ಮಾಧರ್ಮಗಳ ಗಂಟಿಲ್ಲ. ನನ್ನಂತೆ ತಾನು ಮಾಡುವವನೆಂಬ ಅಭಿಮಾನವನ್ನು ತೊರೆದು ಯಾರು ಏನು ಮಾಡಿದರೂ ಅವರಿಗೆ ಆದರ ಧರ್ಮಾಧರ್ಮಗಳು ಗಂಟುಬೀಳುವದಿಲ್ಲ.

**ಅ.**—ಸೃಷ್ಟಿಸುವೆನೆಂದು ಒಂದು ಸಲ ಹೇಳುತ್ತಿ. ಉದಾಸೀನನಾಗಿರುವೆನೆಂದು ಒಂದು ಸಲ ಹೇಳುತ್ತಿ. ಇವೆರಡೂ ಹೇಗೆ ನಿಜವಾದಾವು ?

**ಕೃ.**— ನಾನು ಸಾಕ್ಷಿಮಾತ್ರನಾಗಿರುವೆನು. ನನ್ನ ಸಾನ್ನಿಧ್ಯದ ಬಲದಿಂದ ನನ್ನ ಮಾಯಾಶಕ್ತಿಯು ಚರಾಚರಪ್ರಪಂಚವನ್ನು ಹುಟ್ಟಿಸುತ್ತದೆ. ಇದನ್ನು ತಿಳಿಯದೆ ಜನರು ನನ್ನನ್ನೇ ಸೃಷ್ಟಿಕರ್ತನೆನ್ನುತ್ತಾರೆ.

**ಅ.**— ನಿನ್ನ ಆ ನಿರ್ಗುಣಸ್ವರೂಪವು ಸುಲಭವಾಗಿ ತಿಳಿಯುವಂತಿಲ್ಲವಲ್ಲ !

**ಕೃ.**— ಅದಮಾತ್ರಕ್ಕೇ ಅದರಲ್ಲಿ ಶ್ರದ್ಧೆ ಇಲ್ಲದೆ ನನ್ನನ್ನೊಬ್ಬ ಮನುಷ್ಯನೆಂದು ಹೇಳುತ್ತ ನನಗೆ ಅಪಚಾರವನ್ನು ಮಾಡುವದು ಹಾಸ್ಯಕರವೆ ಸರಿ.

**ಅ.**— ಅದರಿಂದ ಹಾನಿಯೇನು ?

**ಕೃ.**— ನನಗೆ ಮಾಡಿದ ಅಪಚಾರದಿಂದ ಅವರ ಆಶೆಗಳೂ ವ್ಯರ್ಥ; ಅವರ ಅಗ್ನಿಹೋತ್ರ ಮೊದಲಾದ ಕರ್ಮಗಳೂ ವ್ಯರ್ಥ; ಅವರ ತಿಳಿವಳಿಕೆಯೂ ವ್ಯರ್ಥ; ಅವರು ಹೊಡಿ, ಬಡಿ, ಕಡಿ, ಕುಡಿ, ತಿನ್ನು- ಎಂಬ ರಾಕ್ಷಸಸ್ವಭಾವದವರಾಗುವರು.

**ಅ.**— ಶ್ರದ್ಧೆಯುಳ್ಳವರ ನಡೆವಳಿಕೆ ಎಂತಿರುವದು ?

## —ಜ್ಞಾನದ ಬಗೆಗಳು—

**ಕೃ.**— ಅವರು ದೇವತೆಗಳ ಸ್ವಭಾವವನ್ನು ಹೊಂದಿ ದೊಡ್ಡಮನಸ್ಸಿನವರಾಗಿ ಮನಸ್ಸನ್ನೂ ಇಂದ್ರಿಯಗಳನ್ನೂ ಬಿಗಿಹಿಡಿಯುವದೇ ಮೊದಲಾದ ಲಕ್ಷಣಗಳಿಂದ ಕೂಡಿ ಇನ್ನೊಂದೇನನ್ನೂ ಮನಸ್ಸಿಗೆ ತಂದುಕೊಳ್ಳದೆ ಯಾವಾಗಲೂ ನನ್ನನ್ನೇ ಹಾಡುತ್ತ ಹಿಡಿದ ಪಟ್ಟನ್ನು ಬಿಡದೆ ತಮ್ಮ ಯತ್ನವನ್ನು ಮುಂದುವರಿಸುತ್ತ ತಮ್ಮ ಹೃದಯದಲ್ಲಿರುವ ನನ್ನನ್ನು ಎಡೆಬಿಡದೆ ಮನಸ್ಸಿಗೆ ಅಳವಡಿಸಿಕೊಳ್ಳುತ್ತಿರುವರು.

**ಅ.**— ಯಾವ ಯಾವ ಬಗೆಯ ತಿಳಿವಳಿಕೆಯಿಂದ ಅಳವಡಿಸಿಕೊಳ್ಳುತ್ತಿರುವರು ?

**ಕೃ.**— ಪರಬ್ರಹ್ಮವೆಂಬುದು ಅಖಂಡವಾದ ಒಂದೇ ಎಂಬುದೊಂದು ಬಗೆ; ಅದೇ ಆದಿತ್ಯ, ಚಂದ್ರ- ಮೊದಲಾದ ಭೇದದಿಂದ ಇರುವದೆಂಬುದಿನ್ನೊಂದು ಬಗೆ; ಅದೇ ಬಹುಬಗೆಯಾದ ಜಗತ್ತಾಗಿರುವದೆಂಬುದು ಮತ್ತೊಂದು ಬಗೆ.

**ಅ.**— ಹೀಗೆ ಬೇರೆ ಬೇರೆ ಬಗೆಯಿಂದ ತಿಳಿಯುತ್ತ ಹೋದರೂ ನಿನ್ನನ್ನೇ ತಿಳಿದಂತಾಗುವದು ಹೇಗೆ?

**ಕೃ.**— ಎಲ್ಲವೂ ನಾನೇ ಆದ್ದರಿಂದ ನನ್ನನ್ನು ಯಾವ ಬಗೆಯಲ್ಲಿ ತಿಳಿದರೂ ತಪ್ಪಲ್ಲ. ಆದರೆ ನನ್ನನ್ನು ತಿಳಿಯದೆ ಸ್ವರ್ಗವನ್ನು ಬಯಸಿ ಯಜ್ಞವನ್ನು ಮಾಡುವವರು ಸ್ವರ್ಗಕ್ಕೆ ಹೋಗಿ ಇಂದ್ರಪದವಿಯ ಸುಖವನ್ನುಂಡು ಮುಗಿಸಿ ಭೂಲೋಕದಲ್ಲಿಯೇ ಮತ್ತೆ ಹುಟ್ಟುತ್ತಾರೆ. ಬರೀ ಕರ್ಮಗಳ ಹಣೆಯ ಬರಹವೆಲ್ಲ ಇಷ್ಟೆ.

**ಅ.**— ನಿನ್ನನ್ನು ತಿಳಿಯುವದರಲ್ಲಿ ಹೆಚ್ಚುಗಾರಿಕೆ ಏನು?

**ಕೃ.**—ನನ್ನ ಪರಬ್ರಹ್ಮಸ್ವರೂಪವನ್ನೆ ತಮ್ಮ ಆತ್ಮವೆಂದು ನಿಜವನ್ನು ತಿಳಿಯುವವರ ಯೋಗಕ್ಷೇಮವನ್ನೆಲ್ಲ ನಾನು ನೋಡಿಕೊಳ್ಳುತ್ತೇನೆ.

**ಅ.**— ಎಲ್ಲರ ಯೋಗಕ್ಷೇಮಕ್ಕೂ ನೀನೇ ಹೊಣೆಯಲ್ಲವೆ?

**ಕೃ.**— ನಿಜ. ಆದರೆ ಬರೀ ಭಕ್ತರಾದವರು ತಮ್ಮ ಯೋಗಕ್ಷೇಮವನ್ನು ತಾವೂ ನೋಡಿಕೊಳ್ಳುವರು. ಬ್ರಹ್ಮದ ಹೊರತು ಬೇರೊಂದಿಲ್ಲವೇ ಇಲ್ಲವೆಂದರಿತ ಜ್ಞಾನಿಗಳು ತಮ್ಮ ಯೋಗಕ್ಷೇಮವನ್ನು ತಾವು ನೋಡಿಕೊಳ್ಳುವದಕ್ಕೇ ಹೋಗುವದಿಲ್ಲ. ಆದ್ದರಿಂದ ಅವರ ಯೋಗಕ್ಷೇಮವನ್ನೆಲ್ಲ ನಾನೇ ನೋಡಬೇಕು.

**ಅ.**— ಎಲ್ಲ ದೇವತೆಗಳ ಸ್ವರೂಪದಲ್ಲಿರುವವನೂ ನೀನೇ ಆದ್ದರಿಂದ ಯಾವ ದೇವತೆಗೆ ಶರಣೆಂದರೂ ನಿನಗೇ ಶರಣೆಂದಂತೆ ಅಲ್ಲವೆ?

## —ಬೇರೆ ದೇವತೆಗಳ ಉಪಾಸನೆ—

**ಕೃ.**— ಎಲ್ಲ ದೇವತೆಗಳ ಸ್ವರೂಪವೂ ನನ್ನದೇ ಆದರೂ ಅವುಗಳನ್ನು ಪೂಜಿಸುವವರು ಅವು ನನ್ನ ಸ್ವರೂಪವೆಂಬರಿವಿಲ್ಲದೆ ಪೂಜಿಸುತ್ತಾರೆ. ಆದ್ದರಿಂದ ನನ್ನನ್ನು ಪೂಜಿಸಿದ ಫಲವು ಅವರಿಗೆ ಕೈಸೇರುವದಿಲ್ಲ.

**ಅ.**— ಹಾಗಾದರೆ ಬೇರೆ ದೇವತೆಗಳ ಪೂಜೆ ಎಲ್ಲ ವ್ಯರ್ಥವೇ ಆಯಿತಲ್ಲ!

**ಕೃ.**— ಹಾಗಲ್ಲ. ದೇವತೆಗಳನ್ನು ಪೂಜಿಸಿದವರು ದೇವತೆಗಳನ್ನು ಪಡೆಯುತ್ತಾರೆ. ಶ್ರಾದ್ಧ ಮೊದಲಾದ ಕ್ರಿಯೆಗಳಲ್ಲಿ ಆಸಕ್ತರಾಗಿ ಪಿತೃ

ಗಳನ್ನು ಆರಾಧಿಸಿದವರು ಪಿತೃಲೋಕಕ್ಕೆ ಹೋಗುತ್ತಾರೆ. ವಿನಾಯಕ, ಮಾತೃಗಣ— ಮೊದಲಾದ ಭೂತಗಳನ್ನು ಒಲಿಸಿಕೊಂಡವರು ಅದೇ ಭೂತಗಣದಲ್ಲಿ ಸೇರುತ್ತಾರೆ. ನನ್ನನ್ನು ಭಾವಿಸುತ್ತ ಪೂಜಿಸಿದವರು ನನ್ನನ್ನೇ ಹೊಂದುತ್ತಾರೆ. ಎಲ್ಲಕ್ಕೂ ಆಯಾಸವು ಒಂದೇ ಸಮವಾದರೂ ಸರಿಯಾದ ತಿಳಿವಳಿಕೆ ಇಲ್ಲದವರು ನನ್ನ ಪೂಜೆಯನ್ನು ಬಿಟ್ಟು ಕ್ಷುದ್ರಫಲ ವನ್ನು ಪಡೆಯುತ್ತಾರೆ.

ಅ.— ಮತ್ತೆ ಹುಟ್ಟಿದಂತೆ ಆಗುವಂಥ ಹೆಚ್ಚಿನ ಫಲವನ್ನು ಕಳೆದು ಕೊಳ್ಳುವದು ದಡ್ಡತನವೇ ಸರಿ.

## —ಭಗವಂತನ ಉಪಾಸನೆಯ ಹೆಚ್ಚುಗಾರಿಕೆ—

**ಕೃ.**— ನನ್ನ ಪೂಜೆಯಿಂದ ಹೆಚ್ಚಿನ ಫಲವೆಂಬುದೊಂದೇ ಅಲ್ಲ; ಉಳಿದ ದೇವತೆಗಳ ಪೂಜೆಗಿಂತ ನನ್ನ ಪೂಜೆ ಬಹು ಸುಲಭವೂ ಆಗಿರುವದು. ನನಗೆ ಒಂದೆಲೆಯನ್ನೋ ಒಂದು ಹೂವನ್ನೋ ಒಂದು ಹಣ್ಣನ್ನೋ ಕೊನೆ ಗೊಂದು ತೊಟ್ಟು ನೀರನ್ನೋ ಭಕ್ತಿಯಿಂದ ತಂದುಕೊಟ್ಟರೆ ಅವರ ಶುದ್ಧ ಬುದ್ಧಿಗೆ ಮೆಚ್ಚಿ ನಾನು ಅಷ್ಟರಿಂದಲೆ ತೃಪ್ತನಾಗುವೆನು. ಆದ್ದರಿಂದ ಅರ್ಜುನ, ನೀನು ಏನು ಮಾಡಿದರೂ ಏನು ತಿಂದರೂ ಯಾವ ಹೋಮ ವನ್ನು ಮಾಡಿದರೂ ಯಾವ ದಾನವನ್ನು ಮಾಡಿದರೂ ಯಾವ ತಪಸ್ಸನ್ನು ಮಾಡಿದರೂ ನನಗೆ ಒಪ್ಪಿಸಿಬಿಡು. ಹೀಗೆ ಮಾಡಿದರೆ ಕರ್ಮದ ಕಟ್ಟು ನಿನಗೆ ಬೀಳುವದಿಲ್ಲ. ನನಗೆ ಒಪ್ಪಿಸಿದ್ದರಿಂದ ನೀನು ಸಂನ್ಯಾಸಮಾಡಿದವನಾಗುವೆ; ಕರ್ಮವನ್ನು ಮಾಡುವದರಿಂದ ಯೋಗಿಯೂ ಆಗುವೆ. ಇಂಥ ನೀನು ಬದುಕಿರುವಾಗಲೆ ಕರ್ಮಗಳ ಕಟ್ಟನ್ನೆಲ್ಲ ಕಳಚಿಕೊಂಡವನಾಗುತ್ತಿ. ಈ ಶರೀರವು ಬಿದ್ದು ಹೋದ ಮೇಲೆ ನೀನು ನನ್ನನ್ನೇ ಸೇರುತ್ತಿ.

**ಅ.**— ನಿನ್ನ ಭಕ್ತರ ಮೇಲೆ ಹೊರತು ಉಳಿದವರ ಮೇಲೆ ನೀನು ಒಲುಮೆಯನ್ನು ತೋರಿಸುವವನಲ್ಲವಾದ ಮೇಲೆ ನಿನಗೆ ಒಬ್ಬರಮೇಲೆ ಹಗೆ ತನವೂ ಒಬ್ಬರ ಮೇಲೆ ಪ್ರೀತಿಯೂ ಇದ್ದಂತಾಗುವದಿಲ್ಲವೆ?

**ಕೃ.**— ಹಾಗಲ್ಲ. ನನಗೆ ಎಲ್ಲರೂ ಒಂದೆ. ಬೆಂಕಿಯು ದೂರದಲ್ಲಿ ರುವವರ ಚಳಿಯನ್ನು ಕಳೆಯದೆ ಹತ್ತಿರಕ್ಕೆ ಬಂದವರ ಚಳಿಯನ್ನು ಮಾತ್ರ

ಕಳೆಯುವಂತೆ ನಾನು ನನಗೆ ಶರಣೆಂದು ಬಂದವರಿಗೆ ಒಲಿಯುತ್ತೇನೆ. ಭಕ್ತಿಯಿಂದ ನನ್ನನ್ನು ಮರೆಹೊಗುವವರು ನಾನು ಕೊಡುವ ಫಲಕ್ಕೆಂದಲ್ಲದೆ ಸಹಜವಾಗಿ ನನ್ನಲ್ಲಿ ಮನಸ್ಸಿಟ್ಟುಕೊಂಡಿರುವರು. ನಾನೂ ಏನೊಂದು ನಿಮಿತ್ತವೂ ಇಲ್ಲದೆ ಅವರಲ್ಲಿಯೂ ಸಹಜವಾಗಿ ಪ್ರೇಮವನ್ನಿಟ್ಟಿರುವೆನು.

**ಅ.**— ನಿನ್ನ ಭಕ್ತಿಯ ಮಹಿಮೆಯು ಬಹು ದೊಡ್ಡದಾಗಿದೆ!

**ಕೃ.**—ಎಂಥ ಹೆಚ್ಚಿನ ಪಾಪವನ್ನು ಮಾಡಿದವನಾದರೂ ನನ್ನ ಕಡೆಗೆ ತಿರುಗಿ ನೀನೇ ಗತಿಯೆಂದೊಡನೆ ಅವನು ಒಳ್ಳೆಯ ದಾರಿಯನ್ನು ಹಿಡಿದದ್ದರಿಂದ ಪುಣ್ಯಶಾಲಿಯೇ ಆದಂತೆ. ಮುಂದೆ ಒಡನೆ ಅವನ ಮನಸ್ಸು ಧರ್ಮದಲ್ಲಿ ಮುಂದುವರಿದು ಒಳ್ಳೆ ಶಾಂತಿಯನ್ನು ಹೊಂದುವದು. ಪಾಪಿಗಳ ಹೊಟ್ಟೆಯಲ್ಲಿ ಹುಟ್ಟಿದವರೂ ಹೆಂಗಸರೂ, ವೈಶ್ಯರೂ, ಶೂದ್ರರೂ- ಕೂಡ ನನ್ನನ್ನು ಆಶ್ರಯಿಸಿ ಉತ್ತಮಗತಿಯನ್ನು ಹೊಂದಿದ್ದಾರೆ. ಇನ್ನು ಪುಣ್ಯವಂತರ ಹೊಟ್ಟೆಯಲ್ಲಿ ಹುಟ್ಟಿದ ಬ್ರಾಹ್ಮಣರ ಮತ್ತು ಭಕ್ತರಾದ ರಾಜರ್ಷಿಗಳ ಮಾತೇನು! ಮೂರು ದಿನದ ಬಾಳಿನ ಮತ್ತು ನಿಜವಾದ ಸುಖವೆಂಬುದಿಲ್ಲದ ಈ ಮನುಷ್ಯಲೋಕಕ್ಕೆ ಬಂದ ಮೇಲೆ ನನಗೆ ಶರಣುಬರುವದೇ ಪುರುಷಾರ್ಥಸಾಧನ. ನನ್ನಲ್ಲಿ ಮನಸ್ಸನ್ನಿಟ್ಟರೆ ನನ್ನನ್ನೇ ಪಡೆಯುತ್ತಿ.

---

**ಅ.**— ಕೃಷ್ಣ, ಜಗತ್ತನ್ನೆಲ್ಲ ಪೋಣಿಸಿಕೊಂಡಿರುವೆನೆಂದೂ ಜಗಸ್ರೂಪನೇ ಆಗಿರುವೆನೆಂದೂ ನೀನು ಹಿಂದೆ ಹೇಳಿದೆ. ಅದು ನನ್ನ ಮನಸ್ಸಿಗೆ ಚೆನ್ನಾಗಿ ಹಿಡಿಯಲಿಲ್ಲವಲ್ಲ!

## ಮಹಿಮಾತಿಶಯದ ಸ್ವರೂಪ

**ಕೃ.**—ನನ್ನಿಂದ ಎಲ್ಲವೂ ಹುಟ್ಟುವವೆಂದೂ ನನ್ನಲ್ಲಿ ಎಲ್ಲವೂ ಇರುವವೆಂದೂ ನಂಬಿ ಇನ್ನೊಂದನ್ನು ಬಯಸದೆ ಶುದ್ಧವಾದ ಪ್ರೀತಿಯಿಂದ ಯಾವಾಗಲೂ ನನಗೆ ಮರೆಹೊಗುವವರಿಗೆ ನನ್ನನ್ನು ತಮ್ಮ ಆತ್ಮವಾಗಿ ತಿಳಿಯುವ ಬುದ್ಧಿಯನ್ನು ಕೊಡುತ್ತೇನೆ. ಅದರಿಂದ ಅವರು ನನ್ನನ್ನು ಪಡೆಯುತ್ತಾರೆ.

**ಅ.**—ನಿನ್ನನ್ನು ಪಡೆಯುವದಕ್ಕೆ ಅವರಲ್ಲಿ ಯಾವ ತಡೆ ಇರುತ್ತದೆ ? ಅದು ಹೋಗುವದು ಹೇಗೆ ?

**ಕೃ.**—ಅವರ ಮನಸ್ಸಿನಲ್ಲಿ ತಪ್ಪುತಿಳಿವಳಿಕೆಯೆಂಬ ಕಗ್ಗತ್ತಲೆಕವಿದು ಕೊಂಡಿರುತ್ತದೆ. ನಾನು ಅವರ ಮನಸ್ಸಿನೊಳಹೊಕ್ಕು ಸರಿಯಾದ ತಿಳಿವೆಂಬ ದೀಪವನ್ನು ಹಚ್ಚುತ್ತೇನೆ. ಆ ದೀಪಕ್ಕೆ ಭಕ್ತಿಯೇ ಎಣ್ಣೆ ; ನನ್ನ ಮೇಲಿನ ಪ್ರೇಮವಿಶೇಷವೇ ಗಾಳಿ ; ಬ್ರಹ್ಮಚರ್ಯೆಯೇ ಮೊದಲಾದ ಸಾಧನಗಳ ಸಂಸ್ಕಾರದಿಂದ ಕೂಡಿದ ಬುದ್ಧಿಯೇ ಬತ್ತಿ ; ಯಾವ ಬಯಕೆಯೂ ಇಲ್ಲದ ಮನಸ್ಸೇ ಹಣತೆ ; ಪ್ರೀತಿ, ಹಗೆತನ- ಮೊದಲಾದವುಗಳನ್ನು ಬಿಟ್ಟು ವಿಷಯಗಳಿಂದ ಹಿಂದಿರುಗಿದ ಚಿತ್ತವೇ ಗೂಡು; ಒಮ್ಮುಖವಾದ ಮನಸ್ಸಿನಿಂದ ಮಾಡಿದ ಧ್ಯಾನದಿಂದ ಹುಟ್ಟಿದ ಜ್ಞಾನವೇ ಬೆಳಕು.

**ಅ.**—ನೀನು ಜಗತ್ತಿನಲ್ಲಿ ಯಾವ ಯಾವ ವಸ್ತುಗಳಲ್ಲಿ ನಿನ್ನ ಹೆಚ್ಚುಗಾರಿಕೆಯಿಂದ ತುಂಬಿಕೊಂಡಿದ್ದಿ ? ಎಂದರೆ ಯಾವ ಯಾವ ವಸ್ತುಗಳಲ್ಲಿ ನಿನ್ನನ್ನು ಧ್ಯಾನಿಸುವದು ಒಪ್ಪಾಗುತ್ತದೆ ?

**ಕೃ.**—ನನ್ನನ್ನು ಎಲ್ಲ ಪ್ರಾಣಿಗಳ ಆತ್ಮನೆಂದೂ ಹನ್ನೆರಡು ಆದಿತ್ಯರಲ್ಲಿ ವಿಷ್ಣುವೆಂಬ ಆದಿತ್ಯನೆಂದೂ ಬೆಳಗುವ ವಸ್ತುಗಳಲ್ಲಿ ಸೂರ್ಯನೆಂದೂ ವೇದಗಳಲ್ಲಿ ಸಾಮವೇದವೆಂದೂ ದೇವತೆಗಳಲ್ಲಿ ಇಂದ್ರನೆಂದೂ ಮುಂತಾಗಿ ಧ್ಯಾನಿಸಬಹುದು. ಹೀಗೆ ನನ್ನ ಮಹಿಮಾತಿಶಯವನ್ನು ತೋರಿಸುವ ವಸ್ತುಗಳು ಲೋಕದಲ್ಲಿ ಲೆಕ್ಕವಿಲ್ಲದಷ್ಟಿವೆ. ಹೊಳಪು, ಶಕ್ತಿ- ಮೊದಲಾದ ಏನಾದರೊಂದು ಹೆಚ್ಚುಗಾರಿಕೆಯುಳ್ಳ ವಸ್ತುಗಳೆಲ್ಲ ನನ್ನ ಅಂಶವುಳ್ಳವುಗಳೆಂದು ತಿಳಿ. ಹೆಚ್ಚು ಹೇಳುವದೇನು ! ಈ ಜಗತ್ತೆಲ್ಲ ನನ್ನದೊಂದಂಶ.

**ಅ.**—ಕೃಷ್ಣ, ಜಗತ್ತೆಲ್ಲ ನಿನ್ನ ಅಂಶವೆಂಬ ಸ್ವರೂಪವನ್ನು ನಾನು ಕಣ್ಣಾರೆ ನೋಡಬೇಕೆಂದಿದ್ದೇನೆ. ನಾನು ನೋಡಬಹುದಾದರೆ ಅದನ್ನು ತೋರಿಸು.

## —ವಿಶ್ವರೂಪ—

**ಕೃ.**—ಅರ್ಜುನ, ತೋರಿಸುತ್ತೇನೆ ; ನೋಡು. ನೀನು ಅದನ್ನು ಈ ನಿನ್ನ ಚರ್ಮದ ಕಣ್ಣಿನಿಂದಲೆ ನೋಡಲಾರೆ. ದಿವ್ಯಚಕ್ಷುಸ್ಸನ್ನು ಕೊಡುತ್ತೇನೆ (ಎಂದು ವಿಶ್ವರೂಪವನ್ನು ತೋರಿಸಿದನು).



ವಿಶ್ವರೂಪ.

ಅ.— ( ನೋಡಿ ಬೆರಗಾಗಿ ರೋಮಾಂಚವನ್ನು ಹೊಂದಿ ಕಾಲಿಗೆರಗಿ ಕೈಜೋಡಿಸಿಕೊಂಡು) ದೇವ, ನಿನ್ನ ಹೊಟ್ಟೆಯಲ್ಲಿ ದೇವತೆಗಳೂ ಎಲ್ಲಾ ಜಗದ ಪ್ರಾಣಿಗಳೂ ಬ್ರಹ್ಮನೂ ಈಶ್ವರನೂ ವಸಿಷ್ಠರೇ ಮೊದಲಾದ ಎಲ್ಲಾ ಋಷಿಗಳೂ ವಾಸುಕಿ ಮೊದಲಾದ ಉರಗರೂ ಇದ್ದಾರೆ. ನಿನ್ನ ತೋಳು, ಹೊಟ್ಟೆ, ಮುಖ, ಕಣ್ಣು- ಇವುಗಳಿಗೆ ಲೆಕ್ಕವೇ ಇಲ್ಲ. ನಿನ್ನ ರೂಪಕ್ಕೆ ತುದಿಯಿಲ್ಲ; ಮೊದಲಿಲ್ಲ. ನಿನ್ನ ಬೆಳಕು ಧಗಧಗಿಸುವ ಬೆಂಕಿಯಂತೆಯೂ ಸೂರ್ಯನಂತೆಯೂ ಇದೆ. ಕಿರೀಟ, ಗದೆ, ಚಕ್ರ- ಮೊದಲಾದವುಗಳಿರುವ ಬೆಳಕಿನ ಗಟ್ಟಿಯಾದ ನಿನ್ನನ್ನು ಈ ಕಣ್ಣುಗಳು ನೋಡಲಾರವು. ನೀನು ಭೂಮಿಗೂ ಆಕಾಶಕ್ಕೂ ಏಕನಾಗಿದ್ದಿ. ಈ ನಿನ್ನ ರೂಪವನ್ನು ನೋಡಿ ಪಾಪಾತ್ಮರಂತೆ ನಾನು ಹೆದರಿದ್ದೇನೆ. ತಮ್ಮ ಕಡೆಯ ಅರಸರೊಡನೆ ಧೃತರಾಷ್ಟ್ರನ ಮಕ್ಕಳೂ ಭೀಷ್ಮ, ದ್ರೋಣ– ಮೊದಲಾದವರೂ ನಮ್ಮ ದಂಡಿನವರೂ- ಎಲ್ಲರೂ ನಿನ್ನ ಬಾಯೊಳಕ್ಕೆ ನುಗ್ಗುತ್ತಿದ್ದಾರೆ. ಎಷ್ಟೋ ಜನರ ತಲೆಗಳು ನಿನ್ನ ಹಲ್ಲುಸಂದಿಗಳಲ್ಲಿ ಸಿಕ್ಕಿ ಪುಡಿಪುಡಿಯಾಗಿವೆ. ಪತಂಗದ ಹುಳುಗಳು ನುಗ್ಗಿಬಂದು ಬೆಂಕಿಗೆ ಬೀಳುವಂತೆ ಎಲ್ಲರೂ ನುಗ್ಗಿಬಂದು ನಿನ್ನಲ್ಲಿ ಬಿದ್ದು ನಾಶವಾಗುತ್ತಿದ್ದಾರೆ. ನೀನು ಅವರನ್ನೆಲ್ಲ ನಿನ್ನ ಉರಿಯುತ್ತಿರುವ ಬಾಯಿಂದ ನುಂಗುತ್ತಾ ನಾಲಿಗೆಯನ್ನು ಚಪ್ಪರಿಸುತ್ತಿದ್ದಿ. ನೀನು ಯಾರೋ? ನೀನು ಏಕೆ ಹೀಗೆ ಮಾಡುತ್ತೀಯೊ? ನಾನು ಕಾಣೆನಲ್ಲ!

**ಕೃ.**—ನಾನು ಈ ಲೋಕವನ್ನೇ ನುಂಗಿಬಿಡಬೇಕೆಂದು ಹುಟ್ಟಿಬೆಳೆದಿರುವ ಕಾಲಪುರುಷನು. ನಿನ್ನ ಹೊರತು ಉಳಿದ ಎಲ್ಲರೂ - ಯಾರಿಂದ ನಿನಗೆ ಸೋಲಾದೀತೆಂದು ನೀನು ಹೆದರುತ್ತಿದ್ದೆಯೊ ಅವರೆಲ್ಲ-- ಹೇಳುವದಕ್ಕೆ ಹೆಸರು ಕೂಡ ಇಲ್ಲದಂತಾಗುವರು. ಆದ್ದರಿಂದ ಏಳು. ಯಾರಿಂದಲೂ ಗೆಲ್ಲುವದಕ್ಕಾಗದ ಭೀಷ್ಮ ಮೊದಲಾದವರನ್ನೆಲ್ಲ ಗೆದ್ದೆನೆಂಬ ಹೆಸರುವಾಸಿಯನ್ನು ಪಡೆ. ಇಂಥ ಹೆಸರುವಾಸಿ ಬಹುಹೆಚ್ಚಿನ ಪುಣ್ಯಶಾಲಿಗಳಿಗೆ ಮಾತ್ರ ದೊರೆಯುವದು. ಹಗೆಗಳನ್ನೆಲ್ಲ ಗೆದ್ದು ಭೂಮಿಯನ್ನಾಳು. ನಾನೇ ಇವರನ್ನೆಲ್ಲ ಮೊದಲೇ ಕೊಂದುಬಿಟ್ಟಿದ್ದೇನೆ. ನೀನು ನೆಪಮಾತ್ರಕ್ಕೆ ನಿಲ್ಲು. ಹಗೆಗಳನ್ನೆಲ್ಲ ಗೆಲ್ಲುತ್ತಿ.

ಅ.—(ಹೆದರಿ ನಡುಗುತ್ತ ಕೈಜೋಡಿಸಿಕೊಂಡು ಕಾಲಿಗೆರಗಿ ಗದ್ಗದ ಸ್ವರದಿಂದ) ಕೃಷ್ಣ, ನಾನು ಈ ರೂಪವನ್ನು ಎಂದೆಂದೂ ನೋಡಿರಲಿಲ್ಲ. ಎಂದೂ ಕಾಣದ ಇದನ್ನು ನೋಡಿ ಆನಂದವೂ ಆಗಿದೆ ; ಭಯಂಕರವಾದ ರೂಪವನ್ನು ನೋಡಿ ಹೆದರಿಕೆಯಿಂದ ಮನಸ್ಸಿಗೆ ತಲ್ಲಣವೂ ಆಗಿದೆ. ದಯ ವಿಟ್ಟು ನನ್ನ ಗೆಳೆಯತನದ ನಿನ್ನ ಹಿಂದಿನ ರೂಪವನ್ನೇ ತಾಳು.

ಕೃ.—ಅರ್ಜುನ, ನಿನ್ನ ಮೇಲಿನ ಒಲುಮೆಯಿಂದ ನಿನಗೆ ನಾನು ಈ ವಿಶ್ವರೂಪವನ್ನು ತೋರಿಸಿದೆನು. ಇದನ್ನು ಇದುವರೆಗೆ ಯಾರೂ ನೋಡಿಲ್ಲ. (ಎಂದು ಹಿಂದಿನ ರೂಪವನ್ನು ತಾಳಿ) ಹೆದರಬೇಡ. ಹಿಂದಿನ ರೂಪವನ್ನೇ ನೋಡು.

ಅ.—ಕೃಷ್ಣ, ನಿನ್ನ ಗೆಳೆಯತನದ ಈ ಮನುಷ್ಯರೂಪವನ್ನು ನೋಡಿ ಈಗ ನನ್ನ ಮನಸ್ಸು ಸಮಾಧಾನಗೊಂಡಿತು.

ಕೃ.—ನೀನು ಈಗ ನೋಡಿದ ವಿರಾಡ್ರೂಪವನ್ನು ನೋಡಬೇಕೆಂದು ದೇವತೆಗಳು ಕೂಡ ಯಾವಾಗಲೂ ಬಾಯುನೀರುಸುರಿಸುತ್ತಿರುವರು. ಬೇರೆ ಯಾವ ವಿಷಯವನ್ನೂ ಮನಸ್ಸಿಗೆ ಹಚ್ಚಿಕೊಳ್ಳದೆ ನನ್ನ ಮೇಲೆ ಭಕ್ತಿ ಯನ್ನು ತೋರಿಸುವದರಿಂದ ಹೊರತು ಬೇರೆ ತಪಸ್ಸು, ದಾನ- ಮೊದಲಾದ ಯಾವ ಸಾಧನದಿಂದಲೂ ಈ ವಿಶ್ವರೂಪವನ್ನು ಕಾಣಲಾಗುವದಿಲ್ಲ. ಭಕ್ತಿ ಯಿಂದ ಮಾತ್ರ ಇದರ ವಿಚಾರವನ್ನು ಶಾಸ್ತ್ರದಿಂದ ತಿಳಿಯುವದಕ್ಕೂ ಕಣ್ಣಾರೆ ಕಾಣುವದಕ್ಕೂ ಮೋಕ್ಷವನ್ನು ಪಡೆಯುವದಕ್ಕೂ ಸಾಧ್ಯ ವಾಗುತ್ತದೆ. ಆದ್ದರಿಂದ ನೀನು ಮಾಡುವ ಕರ್ಮಗಳನ್ನೆಲ್ಲ ನನಗೆ ಪ್ರೀತಿ ಯಾಗಲೆಂದು ಮಾಡು. ನನ್ನನ್ನೇ ಗತಿಯೆಂದು ತಿಳಿ. ನನ್ನಲ್ಲಿಯೇ ಭಕ್ತಿ ಯನ್ನು ಮಾಡು. ನನ್ನನ್ನೇ ಪಡೆಯುತ್ತಿ.

ಅ.—ನೀನು ಮೊದಲೆಲ್ಲ ನಿರಾಕಾರಸ್ವರೂಪವನ್ನು ಆಳವಡಿಸಿಕೊಳ್ಳ ಬೇಕೆಂದು ಹೇಳಿದೆ. ಈಗ ಸಾಕಾರವಾದ ವಿಶ್ವರೂಪವನ್ನು ತೋರಿಸಿ ನನ್ನ ಮೇಲೆ ಭಕ್ತಿಯನ್ನು ಮಾಡೆನ್ನುತ್ತಿ. ಇವೆರಡರಲ್ಲಿ ಯಾವದು ಮೇಲು ?

## —ಸಾಕಾರರೂಪದ ಮೇಲೆ ಭಕ್ತಿ—

**ಕೃ.**— ಸಾಕಾರವಾದ ವಿಶ್ವರೂಪದ ಮೇಲೆ ಎಡೆಬಿಡದೆ ಭಕ್ತಿಯನ್ನು ಮಾಡುವದು ಮೇಲೆಂದು ನನ್ನ ಅಭಿಪ್ರಾಯ.

**ಅ.**—ನಿರಾಕಾರವನ್ನು ಭಜಿಸುವದು ಮೇಲಾಗುವದಿಲ್ಲವೆ ?

**ಕೃ.**—ಇಂದ್ರಿಯಗಳಿಗೆ ಸಿಲುಕದ ನಿರಾಕಾರಸ್ವರೂಪವನ್ನು ಎಣ್ಣೆಯ ಎಳೆಯಂತೆ ಎಡೆಬಿಡದೆ ಬಹುಕಾಲ ಮನಸ್ಸಿನಲ್ಲಿ ಹರಿಸುತ್ತ ಸಮಬುದ್ಧಿಯುಳ್ಳವರಾಗಿರುವವರು ತಾವೆ ನನ್ನನ್ನು ಪಡೆಯುತ್ತಾರೆ. ಅವರು ನನಗೆ ಬಹಳ ಬೇಕಾದವರೇ ಸರಿ. ಆದರೆ ಎಂಥವರಿಗಾದರೂ ನಿರಾಕಾರದ ಕಲ್ಪನೆಯು ಬರುವದೇ ಕಷ್ಟ. ಅದರಲ್ಲಿಯೂ ದೇಹವನ್ನೇ ತಾವೆಂದು ತಿಳಿದಿರುವವರಿಗೆ ಆ ನಿರಾಕಾರಸ್ವರೂಪದ ಕಲ್ಪನೆಯನ್ನು ತಂದುಕೊಳ್ಳುವದು ಬಹಳ ಕಷ್ಟವಾಗುತ್ತದೆ. ನನ್ನ ವಿಶ್ವರೂಪದಲ್ಲಿ ಮನಸ್ಸನ್ನಿಟ್ಟು ಧ್ಯಾನಿಸುವವರನ್ನು ನಾನೆ ಬೇಗ ಮೇಲಕ್ಕೆತ್ತುತ್ತೇನೆ. ಆದ್ದರಿಂದ ನೀನು ನನ್ನ ವಿಶ್ವರೂಪದಲ್ಲಿ ಮನಸ್ಸನ್ನಿಡು. ದೇಹವನ್ನು ಬಿಟ್ಟಮೇಲೆ ನನ್ನನ್ನೆ ಪಡೆಯುತ್ತಿ.

**ಅ.**—ವಿಶ್ವರೂಪದಲ್ಲಿ ಮನಸ್ಸನ್ನು ನೆಲೆಗೊಳಿಸುವದು ಕೂಡ ನನಗೆ ಕಷ್ಟವೆನಿಸುತ್ತದಲ್ಲ !

**ಕೃ.**—ಮನಸ್ಸನ್ನು ಒಮ್ಮುಖವಾಗಿ ಮಾಡುವಂತೆ ವಿಶ್ವರೂಪವನ್ನೆ ಬೇಡಿಕೊಂಡು ನಿನ್ನ ಯತ್ನವನ್ನು ಮುಂದುವರಿಸು.

**ಅ.**— ಆ ಯತ್ನವೂ ದಕ್ಕದಿದ್ದರೇನು ಮಾಡಬೇಕು ?

**ಕೃ.**— ನನಗೆ ಪ್ರೀತಿಯಾಗಲೆಂದು ಪೂಜೆ ಮೊದಲಾದ ಕರ್ಮಗಳನ್ನು ಮಾಡು. ಇದರಿಂದ ನಿನ್ನ ಮನಸ್ಸು ಒಮ್ಮುಖವಾಗುವದಕ್ಕೆ ಸಹಾಯವಾಗುವದು.

**ಅ.**—ಅದೂ ಸಾಗದಿದ್ದರೆ?

**ಕೃ.**—ನೀನು ಮಾಡುವ ಕರ್ಮಗಳಿಗೆ ಫಲವನ್ನೇನನ್ನೂ ಬಯಸದೆ ನನಗೆ ಪ್ರೀತಿಯಾಗಲೆಂದು ಒಪ್ಪಿಸಿಬಿಡು. ಫಲದ ಬಯಕೆ ಹೋದ ಮೇಲೆ ಶಾಂತಿಗೆ ತಡವೇ ಇಲ್ಲ.

ಅ.— ನಿರಾಕಾರೋಪಾಸಕರು ನಿನಗೆ ಬಹಳ ಬೇಕಾದುದೇಕೆ ?

**ಕೃ.**—ಅವರು ತಮ್ಮ ಹಗೆಗಳ ಮೇಲೆ ಕೂಡ ಹಗೆತನವನ್ನು ಮಾಡುವದಿಲ್ಲ. ಅವರಿಗೆ ಎಲ್ಲರೂ ಸಮ. ಅವರಿಗೆಲ್ಲರೂ ಗೆಳೆಯರು. ಅವರಿಗಿಲ್ಲ ದುಃಖಿಗಳ ಮೇಲೆಯೂ ಕನಿಕರ. ಅವರಿಗೆ ನಾನುನನ್ನದೆಂಬುದಿಲ್ಲ. ಅವರಿಗೆ ಸುಖದುಃಖಗಳಲ್ಲಿ ಸಮದೃಷ್ಟಿ. ಹೊಟ್ಟೆಗೇನೂ ಸಿಕ್ಕದಿದ್ದರೂ ಅವರ ತೃಪ್ತಿಗೇನೂ ಕೊರತೆ ಇಲ್ಲ. ಅವರ ಮನಸ್ಸು ಯಾವಾಗಲೂ ನನ್ನಲ್ಲಿರುವದು. ಅವರಿಗೆ ಆತ್ಮತತ್ತ್ವವು ಚೆನ್ನಾಗಿ ಗೊತ್ತು. ಅವರು ಇನ್ನೊಬ್ಬರ ಮನಸ್ಸನ್ನು ನೋಯಿಸುವದಿಲ್ಲ ; ಇನ್ನೊಬ್ಬರಿಂದ ತಾವೂ ನೊಂದುಕೊಳ್ಳುವದಿಲ್ಲ. ಅವರಿಗೆ ಯಾವ ಬಯಕೆಯೂ ಇಲ್ಲ. ಅವರು ಯಾವ ಕಾರ್ಯವನ್ನಾದರೂ ಮಾಡುವ ಸಮರ್ಥರು. ಅವರು ಏನನ್ನಾದರೂ ಬಯಸಿ ಯಾವ ಕರ್ಮಕ್ಕೂ ಕೈಹಾಕುವದಿಲ್ಲ. ಅವರು ಹರಟುವದಿಲ್ಲ. ಅವರಿಗೆ ದೊರತಷ್ಟೆ ಸಾಕೆನಿಸುತ್ತದೆ. ಅವರು ಒಂದು ಸ್ಥಲಕ್ಕೆ ಕಟ್ಟುಬಿದ್ದಿರುವವರಲ್ಲ. ಇವೆಲ್ಲಾ ಮೋಕ್ಷಕ್ಕೆ ಸಾಕ್ಷಾತ್ಕಾರಣಗಳು. ಅದ್ದರಿಂದ ಅವರು ನನಗೆ ಬಹಳ ಬೇಕಾದವರು.

ಅ.—ಯಾವ ತಿಳಿವಳಿಕೆಯ ಬಲದಿಂದ ಅವರು ಹೀಗಿರುವರು ?

## —ಕ್ಷೇತ್ರದ ಮತ್ತು ಕ್ಷೇತ್ರಜ್ಞನ ಸ್ವರೂಪ—

**ಕೃ.**— ಹೊಲವು ಬೆಳೆಯನ್ನುಂಟುಮಾಡುವಂತೆ ಈ ಶರೀರವು ಕರ್ಮಫಲವನ್ನುಂಟುಮಾಡುವದರಿಂದ ಕ್ಷೇತ್ರವೆನಿಸುವದು. ಹೆಜ್ಜೆಯಿಂದ ತಲೆಯವರೆಗಿನ ಈ ಶರೀರವನ್ನು ತನ್ನ ಹೊರಗಿನದಾಗಿ ನೋಡುವ ಜೀವನು ಕ್ಷೇತ್ರಜ್ಞನೆನಿಸುವನು. ಬ್ರಹ್ಮವನ್ನು ಮೊದಲುಗೊಂಡು ಒಂದು ಸಣ್ಣ ಹುಳದ ವರೆಗೆ ಬೇರೆಬೇರೆ ಕಾಣುವ ಅನೇಕ ಶರೀರಗಳಲ್ಲಿರುವ ಕ್ಷೇತ್ರಜ್ಞನು ಯಾವ ಶರೀರದ ಸಂಬಂಧವೂ ಇಲ್ಲದ ನಾನೆಂದು ತಿಳಿ. ಕ್ಷೇತ್ರ ಮತ್ತು ಕ್ಷೇತ್ರಜ್ಞ ಎಂಬೆರಡನ್ನು ಬಿಟ್ಟು ಜಗತ್ತಿನಲ್ಲಿ ತಿಳಿಯಬೇಕಾದದ್ದಿನ್ನೇನೂ ಇಲ್ಲ. ಅವೆರಡನ್ನೂ ಒಳಕೊಳ್ಳುವ ತಿಳಿವಳಿಕೆಯೇ ಸರಿಯಾದ ತಿಳಿವಳಿಕೆ.

ಅ.—ಈ ಶರೀರವು ಯಾವದರಿಂದ ಆಗಿದೆ ?

**ಕೃ.**— ಐದು ಸೂಕ್ಷ್ಮರೂಪದ ಮಹಾಭೂತಗಳು, ಅವುಗಳ ಕಾರಣ

ವಾದ ಅಹಂಕಾರ, ಅದರ ಕಾರಣವಾದ ಬುದ್ಧಿ, ಅದರ ಕಾರಣವಾದ ಮಾಯಾಶಕ್ತಿ, ಐದು ಜ್ಞಾನೇಂದ್ರಿಯಗಳು, ಐದು ಕರ್ಮೇಂದ್ರಿಯಗಳು ಮನಸ್ಸು, ಶಬ್ದ ಮೊದಲಾದ ಐದು ವಿಷಯಗಳು. ಈ ಇಪ್ಪತ್ತನಾಲ್ಕು ತತ್ತ್ವಗಳಿಂದ ಶರೀರವಾಗಿರುವದೆಂದು ಸಾಂಖ್ಯರು ಹೇಳುವರು.

**ಅ.**— ಈ ಶರೀರದ ಧರ್ಮಗಳೇನು ?

**ಕೃ.**— ಬಯಕೆ, ಹಗೆತನ, ಸುಖ, ದುಃಖ, ದೇಹೇಂದ್ರಿಯಗಳ ಗುಂಪು, ಅದರಲ್ಲಿ ಆತ್ಮಚೈತನ್ಯದ ಪ್ರತಿಬಿಂಬದಿಂದ ಕೂಡಿರುವ ಮನೋವೃತ್ತಿ, ಸೊರಗಿದ ದೇಹೇಂದ್ರಿಯಾದಿಗಳನ್ನು ಹುರಿದುಂಬಿಸುವ ಉತ್ಸಾಹ-ಇವೆಲ್ಲ ಶರೀರದ ಧರ್ಮಗಳು. ಆದ್ದರಿಂದ ಇವೂ ಕ್ಷೇತ್ರವೆಂಬ ಮಾತಿನ ಅರ್ಥದೊಳಗೇ ಅಡಕವಾಗುವವು.

**ಅ.**— ಕ್ಷೇತ್ರದ ವಿಷಯವು ಗೊತ್ತಾಯಿತು. ಇನ್ನು ಕ್ಷೇತ್ರಜ್ಞನ ವಿಷಯವನ್ನು ತಿಳಿಯಹೇಳು.

**ಕೃ.**— ಅರ್ಜುನ, ಕ್ಷೇತ್ರಜ್ಞನ ಸ್ವರೂಪವನ್ನು ಹೇಳುವದಕ್ಕೆ ಮೊದಲು ಅದನ್ನು ತಿಳಿಯುವ ಸಾಧನಗಳನ್ನು ಹೇಳುತ್ತೇನೆ. ಏಕೆಂದರೆ ಆ ಸಾಧನಗಳಿಲ್ಲದೆ ಕ್ಷೇತ್ರಜ್ಞನ ಸ್ವರೂಪವು ತಿಳಿಯುವದಿಲ್ಲ. ಆ ಸಾಧನಗಳೇನೆಂದರೆ– ತಾನು ದೊಡ್ಡವನೆಂದುಕೊಳ್ಳಬಾರದು. ತನ್ನ ಧರ್ಮಾಭಿಮಾನವನ್ನು ಹೊರಗೆ ತೋರಿಸಿಕೊಳ್ಳುವದಕ್ಕೆ ಹೋಗಬಾರದು. ಯಾವ ಪ್ರಾಣಿಯನ್ನೂ ನೋಯಿಸಬಾರದು. ತನಗೆ ಯಾರಿಂದಾದರೂ ಕೇಡಾದರೂ ತಳಮಳಗೊಳ್ಳಬಾರದು. ಒಳಗೂ ಹೊರಗೂ ಒಂದೇ ಆಗಿರಬೇಕು. ಮೋಕ್ಷದ ಸಾಧನವನ್ನು ತಿಳಿಸಿಕೊಡುವ ಗುರುವನ್ನು ಸೇವಿಸಬೇಕು. ಮಣ್ಣಿನಿಂದಲೂ ನೀರಿನಿಂದಲೂ ಮೈಯ್ಯ ಹೊಲಸನ್ನು ತೊಳೆಯಬೇಕು. ಮನಸ್ಸಿನಲ್ಲಿ ಪ್ರೀತಿ, ಹಗೆತನ- ಮೊದಲಾದವು ತಲೆಯೆತ್ತಿದರೆ ಅವುಗಳನ್ನು ತನ್ನ ಹಗೆಗಳೆಂದು ತಿಳಿದು ಹಿಮ್ಮೆಟ್ಟಿಸಬೇಕು. ಮೋಕ್ಷದ ದಾರಿಯನ್ನು ಬಿಟ್ಟಗಲದೆ ಇರಬೇಕು. ದೇಹೇಂದ್ರಿಯಗಳನ್ನು ಬಿಗಿಹಿಡಿದು ಒಳ್ಳೇ ದಾರಿಯಲ್ಲಿಯೇ ಮುಂದುವರಿಸಬೇಕು. ವಿಷಯಸುಖವನ್ನು ಬಯಸದಿರಬೇಕು. ನಾನೆಂಬ ಅಭಿಮಾನವನ್ನು ಬಿಡಬೇಕು. ಹುಟ್ಟುವಿಕೆಯಲ್ಲಿ ಗರ್ಭವಾಸ ಮೊದಲಾದ ದೋಷಗಳಿರುವವೆಂದೂ ಮುಪ್ಪಿನಲ್ಲಿ

ಬುದ್ಧಿಬಲ ಮೊದಲಾದವು ಹೋಗುವ ದೋಷವಿರುವದೆಂದೂ ಅದರಂತೆ ಬೇನೆ, ಸಾವು- ಮೊದಲಾದವೆಲ್ಲವೂ ದೋಷಮಯವೆಂದೂ ಆಲೋಚಿಸುತ್ತಿರಬೇಕು. ಹೆಂಡತಿಮಕ್ಕಳಿಗೇನಾದರೂ ಕಷ್ಟ ಬಂದರೆ ತನಗೆ ಬಂತೆಂಬಷ್ಟು ಆತ್ಮಾಸಕ್ತನಾಗಬಾರದು. ತನಗೆ ಒಳ್ಳೆಯದು ಬಂದರೂ ಕೆಟ್ಟದ್ದು ಬಂದರೂ ಸಮಾಧಾನದಿಂದಿರಬೇಕು. ನನ್ನನ್ನೇ ಗತಿಯೆಂದು ಎಡೆಬಿಡದೆ ನನಗೆ ಮರೆಹೊಗುತ್ತಿರಬೇಕು. ಪ್ರಾಪಂಚಿಕರಾದ ಜನರ ಗದ್ದಲದಲ್ಲಿ ಸೇರದೆ ಏಕಾಂತವಾದ ಶುದ್ಧಸ್ಥಳದಲ್ಲಿ ವಾಸಮಾಡಬೇಕು. ಮೋಕ್ಷವೆಂದಾದೀತೆಂದು ಹಂಬಲಿಸುತ್ತಿರಬೇಕು.

**ಅ.**-- ಈ ರೀತಿಯಲ್ಲಿದ್ದು ತಿಳಿಯಬೇಕಾದದ್ದೇನು ?

**ಕೃ.**— ಹೇಳುತ್ತೇನೆ; ಕೇಳು. ಅದನ್ನು ತಿಳಿದರೆ ಮೋಕ್ಷವೇ ಆಗುತ್ತದೆ. ಅದು ಇನ್ನೊಂದರಿಂದ ಹುಟ್ಟಿದ್ದಲ್ಲವಾದ ಪರಬ್ರಹ್ಮ. ಅದು ಇಂದ್ರಿಯಗಳಿಗೆ ಗೋಚರವಾಗುವದಿಲ್ಲವಾದ್ದರಿಂದ ಅದನ್ನು 'ಇದೆ' ಎಂದು ಹೇಳುವಪಕ್ಕೂ ಆಗುವದಿಲ್ಲ; ಇಲ್ಲವೆಂದು ಹೇಳುವಡಕ್ಕೂ ಆಗುವದಿಲ್ಲ.

**ಅ.**---'ಇದೆ' ಎಂದು ಹೇಳುವಡಕ್ಕಾಗದ ಮೇಲೆ ಇಲ್ಲವೆಂದೇ ಆಗುವವಲ್ಲ !

**ಕೃ.**—ಹಾಗಲ್ಲ. ಅದಕ್ಕೆ ತನ್ನವೆಂಬ ಬೇರೆ ಕೈ, ಕಾಲು- ಮೊದಲಾದವುಗಳಿಲ್ಲದಿದ್ದರೂ ಅದು ಎಲ್ಲರ ಕೈ, ಕಾಲು, ಕಣ್ಣು, ಕಿವಿ- ಮೊದಲಾದ ಎಲ್ಲ ಅವಯವಗಳನ್ನೂ ಆವರಿಸಿಕೊಂಡು ಅವುಗಳ ವ್ಯಾಪಾರವನ್ನು ನಡೆಸುವದರ ಮೂಲಕ ತೋರಿಕೊಳ್ಳುತ್ತಿರುವದು. 'ಇದೆ' ಎಂದೆನಿಸಿಕೊಳ್ಳುವ ರೂಪದಿಂದ ಎಲ್ಲವನ್ನೂ ಹೊತ್ತಿರುವದು. ತಾನು ಸತ್ತ್ವರಜಸ್ತಮೋಗುಣಗಳಿಗೆ ಸಿಕ್ಕದೆ ಆ ಗುಣಗಳಿಂದಾದವುಗಳನ್ನೆಲ್ಲ ತಿಳಿಯುತ್ತಿರುವದು. ಅದು ಶರೀರದ ಒಳಗೂ ಹೊರಗೂ ಎಲ್ಲ ತುಂಬಿದ್ದು ಹಗ್ಗವು ಹಾವಾಗಿ ಕಾಣುವಂತೆ ತಾನು ಚರಾಚರಪ್ರಪಂಚವಾಗಿ ಕಾಣುವದು.

**ಅ.**— ಅದೇ ಚರಾಚರಪ್ರಪಂಚವಾದರೆ ಅದು ಎಲ್ಲರಿಗೂ ಏಕೆ ತಿಳಿಯುವದಿಲ್ಲ ?

**ಕೃ.**— ಅದು ನಾನಾರೂಪದಲ್ಲಿ ತೋರುವದು ನಿಜ. ಅದರ ನಿಜಸ್ವರೂಪವು ಆಕಾಶದಂತೆ ಸೂಕ್ಷ್ಮವಾದದ್ದು. ತಿಳಿದವರಿಗೆ ಅದು ಹತ್ತಿರ

ದಲ್ಲಿ ಅವರ ಆತ್ಮವೇ ಆಗಿ ತೋರಿಕೊಳ್ಳುವದು. ತಿಳಿಯದವರಿಗೆ ಕೋಟಿ ಸಹಸ್ರವರ್ಷಗಳಾದರೂ ತಿಳಿಯದಷ್ಟು ದೂರದಲ್ಲಿರುವದು. ಪ್ರತಿಪ್ರಾಣಿಯಲ್ಲಿಯೂ ಬೇರೆ ಬೇರೆ ಇರುವಂತೆ ಕಂಡರೂ ಅದು ಆಕಾಶದಂತೆ ಅಖಂಡವಾಗಿರುವದು, ಹಗ್ಗವು ಹಾವನ್ನು ಹುಟ್ಟಿಸಿ ಇಟ್ಟುಕೊಂಡಿದ್ದು ತನ್ನಲ್ಲಿಯೇ ಅಡಗಿಸಿಕೊಳ್ಳುವಂತೆ ಅದು ಜಗತ್ತನ್ನು ಹುಟ್ಟಿಸಿ ಇಟ್ಟುಕೊಂಡಿದ್ದು ತನ್ನಲ್ಲಿಯೇ ಅಡಗಿಸಿಕೊಳ್ಳುವದು.

**ಅ.**— ಹೀಗೆ ಅದು ಎಲ್ಲೆಲ್ಲಿಯೂ ಇದ್ದರೂ ಕಾಣದ ಮೇಲೆ ಅದು ಕತ್ತಲೆಯ ಸ್ವರೂಪವಾಗಿರಬಹುದಲ್ಲವೆ?

**ಕೃ.**— ಸೂರ್ಯನೇ ಮೊದಲಾದವುಗಳ ಬೆಳಕಿಗೆಲ್ಲ ಅದರ ಬೆಳಕೇ ಆಧಾರ.

**ಅ.**— ಅದು ಅಂಥ ಬೆಳಕಾದರೆ ಸೂರ್ಯನಲ್ಲಿ ಹೇಗೋ ಹಾಗೆ ಎಲ್ಲ ವಸ್ತುಗಳಲ್ಲಿಯೂ ಏಕೆ ಬೆಳಗುವದಿಲ್ಲ?

**ಕೃ.**— ಮುಖದ ಮುಂದೆ ಗೋಡೆಯೂ ಕನ್ನಡಿಯೂ ಎರಡೂ ಇದ್ದರೂ ಮುಖವು ಗೋಡೆಯಲ್ಲಿ ಪ್ರತಿಬಿಂಬಿಸದೆ ಕನ್ನಡಿಯಲ್ಲಿ ಪ್ರತಿಬಿಂಬಿಸುವಂತೆ ಆತ್ಮನ ಬೆಳಕು ಸೂರ್ಯ ಮೊದಲಾದ ನಿರ್ಮಲವಸ್ತುಗಳಲ್ಲಿ ಎದ್ದು ಕಾಣುವದು.

**ಅ.**—ಕ್ಷೇತ್ರ, ಕ್ಷೇತ್ರಜ್ಞ- ಎಂಬವುಗಳನ್ನೇ ನೀನು ಹಿಂದೆ ನಿನ್ನ 'ಅಪರಾ' ಮತ್ತು 'ಪರಾ' ಎಂಬ ಮಾಯಾಶಕ್ತಿಯ ಸ್ವರೂಪಗಳೆಂದು ಹೇಳಿದ್ದೆಯಷ್ಟೆ. ಆ ಮಾಯಾಶಕ್ತಿಯ ವಿಚಾರವನ್ನು ಇನ್ನಷ್ಟು ಬಿಡಿಸಿ ಹೇಳು.

## —ಮಾಯೆಯ ವಿಚಾರ—

**ಕೃ.**—'ಅಪರಾ' ಎಂಬುದರಿಂದ ತೋರುವ ಮಾಯಾಶಕ್ತಿಯೂ 'ಪರಾ' ಎಂಬುದರಿಂದ ತೋರುವ ಪುರುಷನೂ ಬೇರೊಂದರಿಂದ ಆದವಲ್ಲ. ದೇಹ, ಇಂದ್ರಿಯ, ಬುದ್ಧಿ- ಮೊದಲಾದ ಬಗೆಬಗೆಯ ವಸ್ತುಗಳೂ ಸುಖ, ದುಃಖ, ಮೋಹ- ಮೊದಲಾದ ಗುಣಗಳೂ ಆಗಿರುವದಕ್ಕೆ ಸತ್ತ್ವರಜಸ್ತಮೋಗುಣಾತ್ಮಕವಾದ ಮಾಯೆಯು ಕಾರಣ. ಸುಖದುಃಖಗಳ

ಅನುಭವಕ್ಕೆ ಪುರುಷನು ಕಾರಣ. ಸುಖದುಃಖಗಳ ಅನುಭವವೇ ಸಂಸಾರ. ಆ ಅನುಭವವಿರುವದರಿಂದಲೆ ಜೀವನು ಸಂಸಾರಿ.

**ಅ.**—ಆ ಅನುಭವದಿಂದ ಜೀವನು ಸಂಸಾರಿಯಾಗುತ್ತಾನೆಂಬುದೇಕೆ?

**ಕೃ.**—ಜೀವನು ಮಾಯಾಶಕ್ತಿಯಿಂದಾಗಿರುವ ದೇಹೇಂದ್ರಿಯಾದಿ ವಸ್ತುಗಳನ್ನು ತಪ್ಪುತಿಳಿವಿನಿಂದ ತಾನೆಂದು ತಿಳಿದುಕೊಂಡು ಅನುಭವಿಸುತ್ತ ಆ ಮಾಯಾಶಕ್ತಿಯಿಂದ ಹುಟ್ಟುವ ಸುಖದುಃಖರೂಪವಾದ ಗುಣಗಳನ್ನು ತನ್ನ ಮೇಲೆ ಹಾಕಿಕೊಂಡು ತಾನು ಸುಖಿಯೆಂದೂ ದುಃಖಿಯೆಂದೂ ತಿಳಿಯುತ್ತ ಬಗೆಬಗೆಯ ಬಯಕೆಗಳುಳ್ಳವನಾಗುತ್ತಾನೆ. ಹೀಗೆ ಗುಣಗಳಲ್ಲಿ ಅಭಿಮಾನಗೊಳ್ಳುವದರಿಂದ ಅವನು ಆ ಬಯಕೆಗಳನ್ನು ಉಂಡು ಮುಗಿಸುವದಕ್ಕಾಗಿ ದೇವತೆಗಳೇ ಮೊದಲಾದ ಉತ್ತಮಜನ್ಮವನ್ನೊ ಪಶುಪಕ್ಷಿಗಳೇ ಮೊದಲಾದ ಹೀನಜನ್ಮವನ್ನೊ ಮಧ್ಯಮವಾದ ಮನುಷ್ಯಜನ್ಮವನ್ನೊ ಪಡೆಯಬೇಕಾಗುತ್ತದೆ.

**ಅ.**—ಅವನ ತಪ್ಪು ತಿಳಿವಳಿಕೆಯೇ ಅವನ ಹುಟ್ಟಿಗೆ ಕಾರಣವಾದರೆ ಅವನ ಸರಿಯಾದ ತಿಳಿವಳಿಕೆ ಹೇಗಿರಬೇಕು ?

**ಕೃ.**—ಆ ತಿಳಿಯಬೇಕಾದ್ದರ ಸ್ವರೂಪವನ್ನು ನಾನು ಹಿಂದೆಯೇ ಹೇಳಿದ್ದೇನೆ; ಮತ್ತೆ ಹೇಳುತ್ತೇನೆ ; ಕೇಳು. ಅವನು ದೇಹೇಂದ್ರಿಯಗಳೊಡನೆ ಯಾವ ವ್ಯಾಪಾರಕ್ಕೂ ತೊಡಗದೆ ದೇಹೇಂದ್ರಿಯಗಳ ಎಲ್ಲ ವ್ಯಾಪಾರಗಳನ್ನೂ ಸುಮ್ಮನೆ ನೋಡಿಕೊಂಡಿರುವನು. ಅವನು ದೇಹೇಂದ್ರಿಯಗಳ ವ್ಯಾಪಾರಕ್ಕೆ ಒಪ್ಪಿಗೆಯನ್ನಿತ್ತವನಾಗಿಯೋ ಒತ್ತಾಸೆಗೊಟ್ಟವನಾಗಿಯೋ ಅವುಗಳನ್ನು ಅವುಗಳ ವ್ಯಾಪಾರದಿಂದ ಹಿಮ್ಮೆಟ್ಟಿಸದವನಾಗಿಯೋ ಇರುವನು. ಅವನು ದೇಹೇಂದ್ರಿಯಗಳನ್ನು ಉತ್ತೇಜನಗೊಳಿಸುವವನು ; ಬುದ್ಧಿಯ ಸುಖದುಃಖರೂಪವಾದ ವೃತ್ತಿಗಳನ್ನೆಲ್ಲ ನೋಡುವವನು. ಅವನು ದೇಹ ಮೊದಲಾದವುಗಳಿಗಿಂತ ಬಹಳ ಒಳಗಣ ಆತ್ಮವಾದ್ದರಿಂದ ವೇದವು ಅವನನ್ನು ಪರಮಾತ್ಮನೆಂದು ಕರೆದಿರುವದು. ಈ ಪರಮಾತ್ಮನು ಎಲ್ಲರ ಹೃದಯದಲ್ಲಿಯೂ ಒಂದೇ ಸಮವಾಗಿರುವವನಾಗಿರುವನು. ಈ ಸ್ವರೂಪವನ್ನರಿತರೆ ತನ್ನನ್ನು ತಾನು ಕೊಂದುಕೊಂಡವನಾಗದೆ ಮೋಕ್ಷವನ್ನು ಪಡೆಯುತ್ತಾನೆ.

ಅ.—ಲೋಕದಲ್ಲಿ ಯಾವನು ತಾನೆ ತನ್ನನ್ನು ತಾನೆ ಕೊಂದುಕೊಂಡವನಾಗುತ್ತಾನೆ ?

**ಕೃ.**— ಪರಮಾತ್ಮಸ್ವರೂಪವನ್ನರಿಯದವರೆಲ್ಲರೂ ತಮ್ಮನ್ನು ತಾವು ಕೊಂದುಕೊಂಡವರೆ. ಏಕೆಂದರೆ ಅವರು ನಿಜವಾಗಿ ತಾವು ಪರಮಾತ್ಮಸ್ವರೂಪರೆಂದರಿಯದೆ ತಾವಲ್ಲದ ದೇಹ ಮೊದಲಾದವನ್ನು ತಾವೆಂದು ತಿಳಿದು ಪಾಪಪುಣ್ಯಗಳನ್ನು ಮಾಡಿ ಒಂದು ದೇಹದ ರೂಪವಾದ ಒಬ್ಬ ಆತ್ಮನನ್ನು ಬಿಟ್ಟು ಇನ್ನೊಂದು ದೇಹದ ರೂಪವಾದ ಬೇರೆ ಆತ್ಮನನ್ನು ತೆಗೆದುಕೊಳ್ಳುತ್ತ ಹೀಗೆ ಒಂದನ್ನು ಕೊಂದು ಇನ್ನೊಂದನ್ನು ತೆಗೆದುಕೊಳ್ಳುತ್ತಾರೆ.

ಅ.—ಗುಣಗಳಲ್ಲಿಯೂ ಕರ್ಮಗಳಲ್ಲಿಯೂ ಜೀವರಲ್ಲಿ ಯಾರೂ ಒಬ್ಬರಂತೆ ಒಬ್ಬರು ಇರುವದಿಲ್ಲವಾದ್ದರಿಂದ ಅವನು ಎಲ್ಲರ ಹೃದಯದಲ್ಲಿಯೂ ಒಂದೇ ಸಮನಾಗಿರುವನೆಂಬುದು ಹೇಗೆ ?

**ಕೃ.**—ಗುಣಗಳೂ ಕರ್ಮಗಳೂ ಎಲ್ಲ ಮಾಯಾಶಕ್ತಿಗೆ ಸಂಬಂಧಪಟ್ಟವುಗಳೆಂದೂ ಆತ್ಮನಿಗೆ ಗುಣಗಳ ಮತ್ತು ಕರ್ಮಗಳ ಸಂಬಂಧವೆಳ್ಳಷ್ಟೂ ಇಲ್ಲವೆಂದೂ ತಿಳಿದರೇನೇ ಸರಿಯಾಗಿ ತಿಳಿದಂತೆ. ಬೇರೆ ಬೇರೆ ಕಾಣುವ ಪ್ರಾಣಿಗಳೂ ವಸ್ತುಗಳೂ ಎಲ್ಲವೂ ಶಾಸ್ತ್ರಗಳ ಮತ್ತು ಗುರುಗಳ ಉಪದೇಶದಂತೆ ಒಬ್ಬ ಪರಮಾತ್ಮನಲ್ಲಿಯೇ ಎದ್ದು ಕಾಣುವವೆಂದು ತಿಳಿದರೇನೇ ಸರಿಯಾಗಿ ತಿಳಿದಂತೆ.

ಅ.—ಪರಮಾತ್ಮನು ಎಲ್ಲ ದೇಹಗಳ ಆತ್ಮವಾದರೆ ಅವನಿಗೆ ಆ ಎಲ್ಲ ದೇಹಗಳ ಗುಣದೋಷಗಳ ಸೋಂಕು ಬಡಿಯುವದಲ್ಲ !

**ಕೃ.**—ಆತ್ಮನು ದೇಹ ಮೊದಲಾದವುಗಳಂತೆ ನಾಶವಾಗುವದಿಲ್ಲ. ಏಕೆಂದರೆ ಅವನು ಇನ್ನೊಂದರಿಂದ ಆದ ಅವಯವಗಳುಳ್ಳವನಲ್ಲ. ಮತ್ತು ಗುಣದ ಸಂಬಂಧ ಉಳ್ಳವನಲ್ಲ. ಆದ್ದರಿಂದ ಅವನು ಶರೀರದಲ್ಲಿರುವಂತೆ ಕಾಣಿಸಿಕೊಂಡರೂ ಏನನ್ನೂ ಮಾಡುವವನೂ ಅಲ್ಲ ; ಏನನ್ನೂ ಅಂಟಿಸಿಕೊಳ್ಳುವವನೂ ಅಲ್ಲ.

ಅ.—ಹಾಗೆ ದೇಹದಲ್ಲಿದ್ದು ಕರ್ಮವನ್ನು ಮಾಡಿ ಫಲವನ್ನು ಅಂಟಿಸಿ

ಕೊಳ್ಳುವವನನ್ನು ಬೇರೊಬ್ಬನೆನ್ನೋಣವೆಂದರೆ ಬ್ರಹ್ಮಕ್ಕಿಂತ ಬೇರೊಬ್ಬ ನಿಲ್ಲವೆನ್ನುತ್ತಿ. ಇದಕ್ಕೆ ಸಮಾಧಾನವೇನು ?

**ಕೃ.**--ಮಾಡುವದು, ಅದರ ಫಲ- ಮೊದಲಾದ ವ್ಯವಹಾರವೆಲ್ಲ ಮಾಯೆಯಿಂದಲೆಂಬುದೇ ಸಮಾಧಾನ.

**ಅ.**—ಮಾಡುವಂತೆಯೂ ಫಲವನ್ನು ಅನುಭವಿಸುವಂತೆಯೂ ಕಂಡ ರೂ ಆತ್ಮನಿಗೆ ಅವುಗಳ ಸೋಂಕಿಲ್ಲವೆಂದು ತಿಳಿಯುವದು ಕಷ್ಟವಾಗಿದೆ!

**ಕೃ.**--ದೃಷ್ಟಾಂತವನ್ನು ಕೊಡುತ್ತೇನೆ ; ನೋಡು. ಆಕಾಶವು ಎಲ್ಲೆಲ್ಲಿಯೂ ತುಂಬಿಕೊಂಡಿದ್ದರೂ ಹೇಗೆ ಯಾವ ಸೋಂಕನ್ನೂ ಹೊಂದು ವದಿಲ್ಲವೊ ಹಾಗೆ ಆತ್ಮನು ಎಲ್ಲ ದೇಹಗಳಲ್ಲಿದ್ದರೂ ಅವುಗಳ ಸೋಂಕು ಅವನಿಗಿಲ್ಲ.

**ಅ.**--ಒಬ್ಬ ಆತ್ಮನೆ ಎಲ್ಲ ದೇಹಗಳನ್ನೂ ಚೇತನಗೊಳಿಸುವನೆಂದು ತಿಳಿಯುವದು ಹೇಗೆ ?

**ಕೃ.**—ಲೋಕವನ್ನೆಲ್ಲ ಒಬ್ಬ ಸೂರ್ಯನೆ ಬೆಳಗುವಂತೆ.

**ಅ.**—ಈ ಕ್ಷೇತ್ರ, ಕ್ಷೇತ್ರಜ್ಞ ಅಥವಾ ಪರಾ, ಅಪರಾ- ಎಂಬೆರಡರ ಸೇರಿಕೆಯಿಂದ ಜಗತ್ತಾಯಿತೆಂದು ಹಿಂದೆ ಹೇಳಿದೆಯಲ್ಲ ! ಅದು ಹೇಗೆ ?

**ಕೃ.**— ಕ್ಷೇತ್ರಜ್ಞನಾದ ನಾನು ಬಹುದೊಡ್ಡದಾದ ನನ್ನ ಮಾಯಾಶಕ್ತಿಯಲ್ಲಿ ಸರ್ವಭೂತಗಳ ಉತ್ಪತ್ತಿಗೆ ಕಾರಣನಾದ ಹಿರಣ್ಯಗರ್ಭ ನೆಂಬ ಬ್ರಹ್ಮನ ಬೀಜವನ್ನಿಡುತ್ತೇನೆ. ಹಿರಣ್ಯಗರ್ಭನು ಹುಟ್ಟಿ ಅವನಿಂದ ಎಲ್ಲ ಪ್ರಾಣಿಗಳೂ ವಸ್ತುಗಳೂ ಹುಟ್ಟುತ್ತವೆ.

**ಅ.**—ಜಗತ್ತೆಲ್ಲ ಮಾಯೆಯಿಂದ ಹುಟ್ಟಿದ್ದಾದ ಮೇಲೆ ಅದರ ಮೇಲೆ ಪ್ರೀತಿಯನ್ನು ಮಾಡುವದು ವ್ಯರ್ಥವೆಂದು ಹೇಳಬೇಕಾದ್ದೇ ಇಲ್ಲ !

## —ಸಂಸಾರವೆಂಬ ಮರ—

**ಕೃ.**—ವ್ಯರ್ಥವಲ್ಲದೆ ಏನು ! ಜಗತ್ತಿನ ವ್ಯವಹಾರದ ರೂಪವಾದ ಸಂಸಾರವು ಒಂದು ಅಶ್ವತ್ಥಮರದಂತೆ ಇದೆ. ಅಶ್ವತ್ಥವೆಂದರೆ ನಾಳೆಯ ತನಕ ಕೂಡ ಇರುವಂಥದ್ದಲ್ಲವೆಂಬಂತೆ ಗಳಿಗೆಗಳಿಗೆಗೂ ಮುಕ್ಕಾಗುತ್ತಿರು ವಂಥದ್ದು. ಆದರೂ ಊಹಿಸಲಾಗದಷ್ಟು ಹಿಂದಿನಿಂದ ನಡೆದು ಬಂದಿರು

ವದರಿಂದ ನಾಶವಿಲ್ಲದ್ದೆಂಬಂತಿರುವದು. ಬ್ರಹ್ಮವೆಂಬ ಇದರ ತಾಯಿಬೇರು ಮೇಲುಗಡೆ ಇದೆ. ಮಹತ್ತು, ಅಹಂಕಾರ- ಮೊದಲಾದ ಅದರ ಕೊಂಬೆಗಳು ಕೆಳಗಡೆಗೆ ಹರಿದಿವೆ. ವೇದಗಳೇ ಆ ಮರವನ್ನು ಕಾಪಾಡುವ ಎಲೆಗಳು. ಪ್ರಾಣಿಗಳು ಅವುಗಳ ತಿಳುವಳಿಕೆಗೂ ಕರ್ಮಕ್ಕೂ ತಕ್ಕ ಹಾಗೆ ಪಡೆಯುವ ಗತಿಗಳಂತೆ ರೆಂಬೆಗಳು ಮೇಲುಗಡೆಗೂ ಕೆಳಗಡೆಗೂ ಹರಡಿಕೊಂಡಿವೆ. ಸತ್ತ್ವರಜಸ್ತಮೋಗುಣಗಳು ಈ ಮರವನ್ನು ಬೆಳೆಸುತ್ತವೆ. ಹೊರಗಣ ವಿಷಯಗಳೇ ಚಿಗುರುಗಳು. ಪ್ರಾಣಿಗಳ ಪ್ರೀತಿ, ಹಗೆತನ- ಮೊದಲಾದ ವಾಸನೆಯ ಬೇರುಗಳು ಕೆಳಗಡೆಗೂ ಇಳಿದಿವೆ. ಈ ಮರವು ಹಿಡಿತಕ್ಕೆ ಸಿಕ್ಕುವದಿಲ್ಲ. ಏಕೆಂದರೆ ಕನಸು, ಬಿಸಿಲುಗುದುರೆ, ಮಾಯೆ, ಆಕಾಶದ ಅರಮನೆ- ಮೊದಲಾದವುಗಳಂತೆ ಕಂಡು ಹಾರಿಹೋಗತಕ್ಕದ್ದು. ಆದ್ದರಿಂದ ಅದಕ್ಕೆ ಮೊದಲೂ ನಡುವೆಯೂ ಕೊನೆಯೂ ಕಾಣುವದಿಲ್ಲ. ಅದರ ಬೇರುಗಳು ಆಳಕ್ಕೆ ಇಳಿದಿರುವಂತಿವೆ.

ಅ —ಈ ಮರವನ್ನು ಹೋಗಲಾಡಿಸುವದು ಹೇಗೆ ?

**ಕೃ.**—ಅದರ ಕಡೆ ಆದರವನ್ನು ಮಾಡದೆ- ಎಂದರೆ ಮಕ್ಕಳು, ಹಣ ಮೊದಲಾದವುಗಳನ್ನು ಬಯಸದೆ- ಇರುವದೇ ಅದಕ್ಕೆ ಕತ್ತಿ. ಪರಮಾತ್ಮನ ಕಡೆಗೆ ತಿರುಗುವ ಅಭ್ಯಾಸವೆ ಆ ಕತ್ತಿಗೆ ಸಾಣೆ. ಹೀಗೆ ಮೊನೆಯಾದ ಆ ಕತ್ತಿಯಿಂದ ಈ ಮರವನ್ನು ಕತ್ತರಿಸಿ ಬೇರುಸಹಿತವಾಗಿ ಕಿತ್ತೊಗೆದು ಯಾರ ಮಾಯೆಯಿಂದ ಈ ಮರವು ಎದ್ದುಕೊಂಡಿರುವದೊ ಆ ಮಹಾಪುರುಷನನ್ನು ಹುಡುಕಬೇಕು. ಅವನನ್ನು ಸೇರಿದರೆ ಮತ್ತೆ ಹುಟ್ಟುವ ತೊಡಕಿಲ್ಲ.

ಅ.— ಅದು ಹೇಗೆ ?

**ಕೃ.**— ಜಗತ್ತಿನಲ್ಲಿ ಮಾಡುವವನೂ ಅನುಭವಿಸುವವನೂ ಆಗಿರುವ ಜೀವನು ಪರಮಾತ್ಮನಾದ ನನ್ನ ಅಂಶವೆ. ನೀರಿನಲ್ಲಿ ಪ್ರತಿಬಿಂಬಿಸಿದ ಸೂರ್ಯನು ನೀರು ಹೋಗುತ್ತಲೇ ಸೂರ್ಯನಲ್ಲಿಯೇ ಒಂದಾಗಿ ಹೇಗೆ ಮತ್ತೆ ಹುಟ್ಟುವದಿಲ್ಲವೊ ಗಡಿಗೆಯ ಬಯಲು ಗಡಿಗೆ ಹೋಗುತ್ತಲೆ ದೊಡ್ಡ ಬಯಲಿನಲ್ಲಿ ಒಂದಾಗಿ ಮತ್ತೆ ಹೇಗೆ ಹುಟ್ಟುವದಿಲ್ಲವೊ ಹಾಗೆ.

**ಅ.**—ಪರಮಾತ್ಮನಿಗೆ ಅವಯವಗಳಿಲ್ಲವೆಂದು ಹೇಳಿದ್ದಿ. ಜೀವನು ಅವನ ಅಂಶವಾಗುವದು ಹೇಗೆ ?

**ಕೃ.**--ಶರೀರ ಮೊದಲಾದ ಎಲ್ಲೆಕಟ್ಟಿನಿಂದ ಜೀವನನ್ನು ಅಂಶವೆಂದು ಹೇಳಿದ್ದಾಗಿದೆ. ಶರೀರ ಮೊದಲಾದವುಗಳೆಲ್ಲ ಮಾಯಿಕಗಳೆಂದು ಹೇಳಿದ್ದೇನೆ, ಆದ್ದರಿಂದ ಜೀವನು ಅಂಶನೆಂಬ ಮಾತು ಹುಟ್ಟುಗಟ್ಟಿದ್ದು. ಅವನು ನಿಜವಾಗಿ ಪರಮಾತ್ಮನೇ.

**ಅ.**—ಪರಮಾತ್ಮನು ಸರ್ವೊಳಗಿರುವನೆಂಬುದಕ್ಕೆ ಹೆಗ್ಗುರುತೇನು ?

**ಕೃ.**-- ನಾವು ಉಂಡ ಅನ್ನವನ್ನೆಲ್ಲ ಅರಗಿಸುವ ಜಠರಾಗ್ನಿಯೇ ಅವನ ಹೆಗ್ಗುರುತು.

**ಅ.**— ಅವನ ಜ್ಞಾನವಾಗುವದು ಕಠಿನವಾಗಿ ತೋರುತ್ತದೆ !

**ಕೃ.**-- ಸರಳವಾದ ಮಾರ್ಗದಲ್ಲಿ ನಡೆಯುತ್ತ ಶಾಸ್ತ್ರದಿಂದಲೂ ಗುರುಗಳಿಂದಲೂ ತತ್ತ್ವಾರ್ಥವನ್ನು ತಿಳಿದು ಅದರಲ್ಲಿಯೇ ಮನಸ್ಸಿಟ್ಟು ಶಾಸ್ತ್ರಕ್ಕೆ ಒಪ್ಪಾದ ಒಳ್ಳೆ ಕೆಲಸಗಳಲ್ಲಿಯೇ ಇರುವ ದೇವಸ್ವಭಾವದವರಿಗೆ ಆ ತಿಳಿವಳಿಕೆಯು ಒಲಿಯುತ್ತದೆ. ದಂಭ, ದರ್ಪ ಮೊದಲಾದ ಅಸುರಸ್ವಭಾವದವರಿಗೆ ಮಾತ್ರ- ಮುಖ್ಯವಾಗಿ ಕಾಮ, ಕ್ರೋಧ, ಲೋಭ ಎಂಬ ಮೂರುಳ್ಳವರಿಗೆ- ಅದು ದೂರದ ಮಾತೇ ಸರಿ.

**ಅ.**—ಶಾಸ್ತ್ರದ ವಿಚಾರವೇನೂ ತಿಳಿಯದೆ ಹಿರಿಯರ ಪದ್ಧತಿಯೆಂದು ಶ್ರದ್ಧೆಯಿಂದ ದೇವರ ಪೂಜೆ-ಮೊದಲಾದವುಗಳನ್ನು ಮಾಡುವದು ಯಾವ ಗುಣವೆನಿಸುತ್ತದೆ ?

## —ಗುಣಗಳನ್ನು ಗೊತ್ತುಮಾಡುವದು—

**ಕೃ.**— ಫಲವನ್ನು ಬಯಸದೆ ದೇವತೆಗಳನ್ನು ಪೂಜಿಸುವದು ಸಾತ್ತ್ವಿಕ ; ದಂಭ, ಅಹಂಕಾರ, ಬಯಕೆ- ಮೊದಲಾದವುಗಳಿಂದ ಕೂಡಿ ಯಕ್ಷರನ್ನೂ ರಾಕ್ಷಸರನ್ನೂ ಪೂಜಿಸುವದು ರಾಜಸ; ತನಗೂ ಇತರರಿಗೂ ಪೀಡೆಯಾಗುವಂತೆ ಪ್ರೇತಗಳನ್ನೂ ಭೂತಗಣಗಳನ್ನೂ ಪೂಜಿಸುವದು ತಾಮಸ.

**ಅ.**-- ಆತ್ಮಸ್ವರೂಪವು ತಿಳಿಯುವದಕ್ಕೆ ಮುಂಚೆ ಕರ್ಮವನ್ನು ಮಾಡುವವರ ಗುಣವನ್ನು ಗೊತ್ತುಮಾಡುವದು ಹೇಗೆ ?

**ಕೃ.**--ದೇವರ ಸೇವೆ, ದಾನ, ತಪಸ್ಸು (ಬ್ರಹ್ಮಚರ್ಯ, ಅಹಿಂಸೆ ಮೊದಲಾದದ್ದು ಶಾರೀರತಪಸ್ಸು; ಸತ್ಯವೂ ಹಿತವೂ ಪ್ರಿಯವೂ ಆದ ಮಾತೂ ವೇದಾಧ್ಯಯನವೂ ಮೊದಲಾದದ್ದು ವಾಙ್ಮಯತಪಸ್ಸು; ಮನಸ್ಸಿನ ಶಾಂತಿ ಮನೋನಿಗ್ರಹ ಮೊದಲಾದದ್ದು ಮಾನಸಿಕತಪಸ್ಸು) -- ಈ ಕರ್ಮಗಳನ್ನು ಚಿತ್ತಶುದ್ಧಿಗಾಗಿ ಮಾಡಲೇಬೇಕು. ಇವುಗಳನ್ನು ನಾನು ಮಾಡುವವ ನೆಂಬ ಅಭಿಮಾನವನ್ನು ಬಿಟ್ಟು ಯಾವ ಫಲವನ್ನೂ ಬಯಸದೆ ತನ್ನ ಕರ್ತವ್ಯ ವೆಂದು ತಿಳಿದು ಮಾಡುವದು ಸಾತ್ತ್ವಿಕ. ಶರೀರಕ್ಕೆ ಆಯಾಸವಾಗುವ ದೆಂದು ಬಿಡುವದು ರಾಜಸ; ತಿಳಿವಳಿಕೆಯಿಲ್ಲದೆ ಬಿಡುವದು ತಾಮಸ.

**ಅ.**— ಕರ್ಮವನ್ನು ಬಿಡುವದರ ಗುಣದ ವಿಷಯವಾಗಿ ಕೇಳಿದ ಮಾತಿಗೆ ಮಾಡುವದನ್ನು ಸಾತ್ತ್ವಿಕವೆಂದು ಹೇಳಿದ ಮಾತು ಹೇಗೆ ಹೊಂದುತ್ತದೆ?

**ಕೃ.**--ಅದೇನೂ ತಪ್ಪಲ್ಲ. ಶರೀರ ಕರ್ಮವನ್ನೇ ಮಾಡದೆ ಬಿಡುವದು ಸಾಧ್ಯವೇ ಅಲ್ಲ. ಸಾತ್ತ್ವಿಕತ್ಯಾಗಿಯಲ್ಲಿ ಅದರ ಫಲದ ಬಿಡುವಿಕೆ ಇದೆ. ಆದ್ದರಿಂದ ಆ ಮಾತು ಹೊಂದುತ್ತದೆ.

**ಅ.**— ಸಾತ್ತ್ವಿಕತ್ಯಾಗದ ಫಲವೇನು?

**ಕೃ.**— ತಾನು ಯಾರು? ತಾನಲ್ಲದ್ದು ಯಾವದು? ಎಂಬುದನ್ನು ವಿಂಗಡಿಸಿ ತಿಳಿಯುವ ಸತ್ತ್ವಗುಣ ಉಂಟಾಗಿ ಅವನು ತಾನು ಏನನ್ನೂ ಮಾಡುವವನಲ್ಲವೆಂಬ ತಿಳಿವಳಿಕೆಯನ್ನು ಪಡೆಯುತ್ತಾನೆ. ಈ ತಿಳಿವಳಿಕೆ ಯುಳ್ಳವನು ಜಗತ್ತನ್ನೆಲ್ಲ ಕೊಂದರೂ ಕೊಂದ ಹಾಗಲ್ಲ.

**ಅ.**-- ಹಾಗಾದರೆ ಕರ್ಮವು ಯಾರಿಂದ ನಡೆಯುತ್ತದೆ?

**ಕೃ.**— ಶರೀರ, ಜೀವ, ಇಂದ್ರಿಯಗಳು ಐದು, (ಪ್ರಾಣ, ಅಪಾನ, ವ್ಯಾನ, ಉದಾನ, ಸಮಾನ) ವಾಯುಗಳ ವ್ಯಾಪಾರಗಳು, ಇಂದ್ರಿಯ ಮೊದಲಾದವುಗಳ ಆದಿತ್ಯ ಮೊದಲಾದ ಅಭಿಮಾನದೇವತೆಗಳು. ಎಲ್ಲ ಕರ್ಮಗಳೂ ಈ ಐದರಿಂದಾಗುವವು. ಆದ್ದರಿಂದ ಆತ್ಮನನ್ನು ಮಾಡುವವ ನನ್ನಾಗಿ ತಿಳಿಯುವದು ಮೋಡಗಳ ಓಟವನ್ನು ನೋಡಿ ಚಂದ್ರನು ಓಡು ವನೆಂದಂತೆ ದಡ್ಡತನ.

ಅ.— ಆತ್ಮವಿಷಯಕವಾದ ತಿಳಿವಳಿಕೆಯ ಗುಣಗಳನ್ನು ಗೊತ್ತು ಮಾಡುವದು ಹೇಗೆ?

ಕೃ.— ಬಿಡಿಬಿಡಿಯಾಗಿ ತೋರುವ ಎಲ್ಲಾ ಪ್ರಾಣಿಗಳಲ್ಲಿಯೂ ಎಲ್ಲ ವಸ್ತುಗಳಲ್ಲಿಯೂ ಅಖಂಡವಾದ ಒಂದೇ ಒಂದು ಆತ್ಮವಿರುವದೆಂದು ತಿಳಿಯುವದು ಸಾತ್ತ್ವಿಕ. ಬೇರೆ ಬೇರೆ ಶರೀರಕ್ಕೆ ಬೇರೆ ಬೇರೆ ಆತ್ಮನೆಂದು ತಿಳಿಯುವದು ರಾಜಸ. ಯುಕ್ತಿಗೆ ಹೊಂದಿಸದೆ ತಪ್ಪುತಪ್ಪಾಗಿ ಜೀವನು ದೇಹದಷ್ಟು ಪರಿಮಾಣದವನೆಂದೂ ಕಲ್ಲಿನ ಅಥವಾ ಮರದ ಪ್ರತಿಮೆಯೇ ಈಶ್ವರನೆಂದೂ ತಿಳಿಯುವದು ತಾಮಸ.

ಅ.— ಅಖಂಡವಾದ ಆತ್ಮವಸ್ತುವನ್ನರಿಯುವದಕ್ಕೆ ಸಾಧನವಾಗಿ ಚಿತ್ತಶುದ್ಧಿಗಾಗಿ ಕರ್ಮಗಳನ್ನು ಮಾಡಬೇಕೆಂದೆಯಲ್ಲ! ಚಿತ್ತಶುದ್ಧಿಯಾದದ್ದನ್ನು ಗೊತ್ತುಮಾಡಿಕೊಳ್ಳುವದು ಹೇಗೆ?

## —ಸ್ವಧರ್ಮ—

ಕೃ.— ಮನಸ್ಸಿಗೆ ಆತ್ಮಸ್ವರೂಪವಿಷಯಕವಾದ ವಿಚಾರವು ಹಿಡಿಯುವದಕ್ಕೆ ಮೊದಲಾದರೆ ಚಿತ್ತಶುದ್ಧಿಯಾಗುತ್ತ ಬಂತೆಂದರಿಯಬೇಕು.

ಅ.— ಕೆಲಕೆಲವರ ಸ್ವಧರ್ಮದಲ್ಲಿ ದೋಷವು ಕಾಣುತ್ತದಲ್ಲ! ಉದಾಹರಣೆಗೆ ಕ್ಷತ್ರಿಯನ ಸ್ವಧರ್ಮವಾದ ಯುದ್ಧವು ಹಿಂಸೆಯೆಂಬ ದೋಷದಿಂದ ಕೂಡಿದ್ದಲ್ಲವೆ?

ಕೃ.— ಯುದ್ಧವು ಹಿಂಸಾದೋಷದಿಂದ ಕೂಡಿದ್ದರೂ ಕ್ಷತ್ರಿಯನ ಸ್ವಭಾವಕ್ಕೆ ಅದು ಒಗ್ಗುತ್ತದೆ. ವಿಷದಲ್ಲಿ ಹುಟ್ಟಿದ ಹುಳು ವಿಷದಲ್ಲಿದ್ದರೂ ಸಾಯದಿರುವಂತೆ ಕ್ಷತ್ರಿಯನು ಧರ್ಮಯುದ್ಧವನ್ನು ಮಾಡುವದರಿಂದ ಕೆಡುವದಿಲ್ಲ. ಇದರ ಮೇಲೆ ಬೆಂಕಿಯು ಹೊಗೆಯಿಂದ ಕೂಡಿರುವಂತೆ ಎಲ್ಲ ಉದ್ಯೋಗಗಳೂ ಸತ್ತ್ವರಜಸ್ತಮೋಗುಣಗಳಿಂದ ಕೂಡಿರುವದರಿಂದ ದೋಷಗಳಿಂದ ಕೂಡಿಯೇ ಇವೆ. ಆದ್ದರಿಂದ ದೋಷದಿಂದ ಕೂಡಿದ್ದೆಂದು ಬಿಡದೆ ಸ್ವಧರ್ಮವನ್ನು ಈಶ್ವರಪ್ರೀತಿಗಾಗಿ ಮಾಡಿ ಚಿತ್ತಶುದ್ಧಿಯನ್ನು ಪಡೆದು ಧ್ಯಾನವನ್ನು ಬೆಳೆಸಿ ಜ್ಞಾನಿಯಾಗಬೇಕು. ಅರ್ಜುನ, ನೀನು ನನ್ನನ್ನೇ ಗತಿಯೆಂದು ನಂಬಿ ನಿನ್ನ ಸ್ವಧರ್ಮವನ್ನು ಮಾಡು. ನನ್ನ ಮಹಿ

ಲಿಗೆ ಬಿದ್ದು ಎಂಥ ಕರ್ಮವನ್ನು ಮಾಡಿದರೂ ಅವನು ನನ್ನನ್ನೇ ಪಡೆಯುತ್ತಾನೆ. ನನ್ನ ಮಾತನ್ನು ಕೇಳದೆ ಹೋದರೆ ನೀನು ಹಾಳಾಗುವೆ. ನಾನು ಕಾದುವದಿಲ್ಲವೆಂದು ನೀನು ಕೈಮುದುರಿಕೊಳ್ಳುವದು ಉಪಯೋಗವಿಲ್ಲ. ನಿನ್ನ ಸ್ವಭಾವವೇ ನಿನ್ನನ್ನು ಯುದ್ಧಕ್ಕೆ ತಳ್ಳುತ್ತದೆ. ಆದ್ದರಿಂದ ನಾನು ಮಾಡುವವನಲ್ಲವೆಂಬ ತಿಳಿವಳಿಕೆಯನ್ನು ಜಾಗರೂಕವಾಗಿಟ್ಟುಕೊಂಡು ನನ್ನನ್ನು ನಿನ್ನ ಆತ್ಮವಾಗಿ ತಿಳಿದು ಕಾದು. ನಾನು ನಿನಗೆ ಮೋಕ್ಷವನ್ನು ದೊರಕಿಸುತ್ತೇನೆ.

**ಅ.**— ಕೃಷ್ಣ, ಎಲ್ಲ ದುಃಖಗಳಿಗೂ ಕಾರಣವಾದ ನನ್ನ ತಪ್ಪುತಿಳಿವಳಿಕೆ ಹೋಯಿತು. ನಿನ್ನನುಗ್ರಹದಿಂದ ಆತ್ಮತತ್ತ್ವವು ನನ್ನ ಮನಸ್ಸಿಗೆ ಹೊಳೆಯಿತು. ನನ್ನ ಮನಸ್ಸಿನ ಸಂಶಯಗಳೆಲ್ಲ ಹಿಮ್ಮೆಟ್ಟಿದವು. ಇನ್ನು ನಿನ್ನ ಮಾತಿನಂತೆ ನಡೆಯುತ್ತೇನೆ.

**ಓಂತತ್ಸತ್**

ಲೇಖಕ: **ಹೊಸಕೆರೆ ಚಿದಂಬರಯ್ಯ** ಬೆಲೆ: ೨-೮-೦

# ಗೀತಾರ್ಥಚಂದ್ರಿಕೆ ಹೇಗಿದೆ?

೭. ಪ್ರತಿಯೊಬ್ಬರೂ ಇದನ್ನು ತಮ್ಮ ಹತ್ತಿರ ಇಟ್ಟುಕೊಂಡು ದಿನಾಲು ಓದಿದರೆ ಸ್ವಲ್ಪೇ ದಿನಗಳಲ್ಲಿ ಗೀತೆಯ ಅರ್ಥವು ಮನದಟ್ಟಾಗುವದಲ್ಲದೆ ಪ್ರತಿಯೊಂದು ಶಬ್ದದ ಅರ್ಥ ತಿಳಿಯಲೂ ಅನುವಾಗುವದು. **—ಸಂಯುಕ್ತಕರ್ಣಾಟಕ**

೮. ಸಂಸ್ಕೃತಭಾಷೆಯ ಶುದ್ಧಾಂಗ ಪರಿಚಯವಿಲ್ಲದಿದ್ದವರೂ ಸಹ ಈ ಗ್ರಂಥದ ಸಹಾಯದಿಂದ ಪ್ರತಿಶ್ಲೋಕದ ಪ್ರತಿಪದದ ಮುಖ್ಯಾರ್ಥವೇನೆಂಬದನ್ನು ಗ್ರಹಿಸಿ ಸಮಗ್ರ ಗೀತೆಯ ಮುಖ್ಯೋದ್ದೇಶವನ್ನು ತಿಳಿದುಕೊಳ್ಳಬಹುದಾಗಿದೆ. ಗೀತಾಗ್ರಂಥಪಾರಾಯಣಕ್ಕೆ ಸರ್ವವಿಧದಿಂದಲೂ ಅನುಕೂಲವೆನ್ನಿಸುವಂತೆ ಇದನ್ನು ರಚಿಸಿರುತ್ತಾರೆ. ಕನ್ನಡಿಗರು ಈ ಗ್ರಂಥರತ್ನವನ್ನು ಸಾಧ್ಯವಾದಷ್ಟು ಮಟ್ಟಿಗೂ ಸಂಗ್ರಹಿಸಿ ಪ್ರಯೋಜನ ಹೊಂದಲು ಇದು ಸುವೇಳೆಯೆಂದು ಸೂಚಿಸುವೆವು. **——ಸುಬೋಧ**

೯. ಶ್ರೀಮದ್ಭಗವದ್ಗೀತೆಯನ್ನು ಶ್ಲೋಕ, ಪ್ರತಿಪದಾರ್ಥ, ಬೇರೆಬೇರೆ ಶ್ಲೋಕಗಳಲ್ಲಿ ಬರುವ ಬೇರೆಬೇರೆ ವಿಷಯಗಳಿಗೆ ಸಂಬಂಧ, ಅರ್ಥವಿಶೇಷ, ಪಾಠಾಂತರ ಮತ್ತು ಆಧಾರವಾಕ್ಯಸಹಿತವಾಗಿ ಬರೆದಿರುವ ಶ್ರೀ. ಚಿದಂಬರಯ್ಯನವರ ಪ್ರಯತ್ನವು ಅತ್ಯಂತ ಶ್ಲಾಘನೀಯವಾದುದು. ಪ್ರತಿಯೊಬ್ಬರೂ ಈ ಗ್ರಂಥದ ಒಂದೊಂದು ಪ್ರತಿಯನ್ನು ತರಿಸಿಡಲೇಬೇಕು. **——ಲೋಕರಹಸ್ಯ**

೧೦. ಇವರು (ಈ ಗ್ರಂಥದಲ್ಲಿರುವ ವಿಶೇಷಸೌಕರ್ಯಗಳ ವಿಚಾರವಾಗಿ) ಹೇಳಿಕೊಂಡಿರುವದರಲ್ಲಿ ಹೆಚ್ಚು ಉತ್ಪ್ರೇಕ್ಷೆ ಇಲ್ಲ. ಇದು ಕನ್ನಡಿಗರಿಗೆ ಬಹಳ ಉಪಯೋಗಕರವಾದ ಪುಸ್ತಕವೆಂಬದನ್ನು ಖಂಡಿತವಾಗಿ ಹೇಳಬಲ್ಲೆವು.

**——ವಿದ್ಯಾದಾಯಿನಿ**

೧೧. We wish every kannadiga will purchase a copy of Geethartha Chandrike and go through it as a *religious duty*. **—Evening Mail**

**ಎಸ್. ಎಸ್. ಎನ್. ಬುಕ್ ಡಿಪೊ, ಬಸವನಗುಡಿ, ಬೆಂಗಳೂರು ಸಿಟಿ.**